# ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ

***(A Role of NGO's in Tribal Development)***

(ಕನ್ನಡ ವಿಶ್ವವಿದ್ಯಾಯಲಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ಕೊಟ್ರೇಶಿ ಎಸ್.ಎಂ**

ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ .ಕೆ**

ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೭-೦೮

# ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ

*(A Role of NGO's in Tribal Development)*

(ಕನ್ನಡ ವಿಶ್ವವಿದ್ಯಾಯಲಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)

ಸಂಶೋಧನಾ ವಿದ್ಯಾರ್ಥಿ
**ಕೊಟ್ರೇಶಿ ಎಸ್.ಎಂ**

ಮಾರ್ಗದರ್ಶಕರು
**ಡಾ. ಕೇಶವನ್ ಪ್ರಸಾದ .ಕೆ**
ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-583 276
2007-08

# ಮಾರ್ಗದರ್ಶಕರ ದೃಢೀಕರಣ ಪತ್ರ

**ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ. ಫಿಲ್. ಪದವಿಗಾಗಿ ಶ್ರೀ ಕೊಟ್ರೇಶಿ ಎಸ್. ಎಂ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30.10.08

**ಡಾ. ಕೇಶವನ್ ಪ್ರಸಾದ್. ಕೆ.**
ಪ್ರಾಧ್ಯಾಪಕರು,
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಎಂಬ ನಿಬಂಧವನ್ನು ಡಾ. ಕೇಶವನ್ ಪ್ರಸಾದ್. ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ. ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕೊಟ್ರೇಶಿ ಎಸ್. ಎಂ.
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

<u>ಪರಿವಿಡಿ</u>





# ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ

## (ಬಳ್ಳಾರಿ ಜಲ್ಲೆಯನ್ನು ಅನುಲಕ್ಷಿಸಿ)

## ಅಧ್ಯಾಯ-1

## ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ :**

ಕರ್ನಾಟಕ ರಾಜ್ಯದಲ್ಲಿ ಕಾರ್ಯನಿರತವಾಗಿರುವ ಸ್ವಯಂ ಸೇವಾ ಸಂಸ್ಥೆಗಳು ಸುಮಾರು 500 ರಿಂದ 600 ಸ್ವಯಂ ಸೇವಾಸಂಸ್ಥೆಗಳು ಕಾರ್ಯನಿರತವಾಗಿವೆ. ಇವುಗಳಲ್ಲಿ ಅನೇಕ ನೋಂದಾಯಿತ ಸಂಸ್ಥೆಗಳಿದ್ದರೂ ಸಹ ಸ್ವಂತ ಅನುಕೂಲಕ್ಕಾಗಿ ಮಾತ್ರ ಕಾರ್ಯ ನಿರ್ವಹಿಸುತ್ತಿವೆ ಎಂಬ ಕಾರಣಕ್ಕಾಗಿ ಅವುಗಳನ್ನು ಗಂಭೀರವಾಗಿ ಪರಿಗಣಿಸಲಾಗಿಲ್ಲ. ಯಾವಾಗಲೋಮ್ಮೆ ಸಂಪರ್ಕ ಮತ್ತು ಸಂವಾದದಲ್ಲಿ ತೊಡಗುತ್ತವೆಯಾದರೂ ಸ್ವಯಂ ಸೇವಾ ಸಂಸ್ಥೆಗಳು ಪ್ರತ್ಯಕ್ಷವಾಗಿ ಕೆಲಸ ಮಾಡುವ ಸಂದರ್ಭಗಳೇ ಹೆಚ್ಚು. ಸ್ವಯಂ ಸೇವಾ ಸಂಸ್ಥೆಗಳು ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಅಥವಾ ಸಮಾನ ಮನಸ್ಕರಿಂದ ಕೂಡಿದ ಸಣ್ಣ ಗುಂಪಿನಿಂದ ಪ್ರಾರಂಭವಾಗುತ್ತವೆ. ಸ್ಥಳ ಮತ್ತು ಅಲ್ಲಿನ ಸಮಸ್ಯೆಯ ಆಯ್ಕೆಯು ಆ ಸಂಸ್ಥೆಯದ್ದೇ ಆಗಿರುತ್ತದೆ. ನಗರ ಪ್ರದೇಶಗಳಲ್ಲಿ ಕೆಲಸ ಮಾಡುವ ಸ್ವಯಂ ಸೇವಾ ಸಂಸ್ಥೆಗಳಿಗೂ ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುವ ಸಂಸ್ಥೆಗಳಿಗೂ ಹಲವು ವಿಚಾರಗಳಲ್ಲಿ ಸಾಮ್ಯತೆ ಇದೆ. ಇನ್ನೂ ಕೆಲವುಗಳಲ್ಲಿ ಭಿನ್ನತೆ ಇದೆ. ನಗರ ಪ್ರದೇಶಗಳಲ್ಲಿ ಕೆಲಸ ಮಾಡುವವರು ಕೊಳಗೇರಿಗಳಲ್ಲಿ ವಾಸಿಸುವವರ ಅದರಲ್ಲಿಯೂ ಮನೆಗೆಲಸದವರು, ಕುಡಿತ ಲೈಂಗಿಕ ಅಪರಾಧಗಳು, ಪರಿಸರ ಮುಂತಾದ ಸಮಸ್ಯೆಗಳನ್ನು ಕುರಿತು ಕೆಲಸ ಮಾಡುತ್ತವೆ. ಮತ್ತು ಮಾನವ ಹಕ್ಕುಗಳು , ಗ್ರಾಹಕರ ಸಮಸ್ಯೆಗಳು ಹಾಗೂ ಶಿಕ್ಷಣದ ಕಡೆಗೂ ಆ ಸಂಸ್ಥೆಗಳು ಗಮನ ಹರಿಸುತ್ತವೆ.

ಗ್ರಾಮಾಂತರ ಅಥವಾ ಹಳ್ಳಿವಲಯಗಳಲ್ಲಿನ ಸಂಸ್ಥೆಗಳು ಗ್ರಾಮೀಣಾಭಿವೃದ್ಧಿ , ಶಿಕ್ಷಣ, ಆರೋಗ್ಯ ಕುಡಿಯುವ ನೀರು ಇತ್ತೀಚಿಗೆ ಪರಿಸರದ ಅಂಶಗಳು, ದುರ್ಬಲ ವರ್ಗಗಳ ಶೋಷಣೆ, ಭೂಮಿಗೆ ಸಂಬಂಧಿಸಿದ ಪ್ರಕರಣಗಳು, ಜಾತಿ ಹಾಗೂ ಧಾರ್ಮಿಕ, ಅಲ್ಪಸಂಖ್ಯಾತರ ಸಮಸ್ಯೆಗಳು , ಮಹಿಳೆಯರ ಸ್ಥಾನಮಾನದ ಬಗ್ಗೆ ಗಮನವನ್ನು ಕೇಂದ್ರೀಕರಿಸುತ್ತವೆ. ಕುಡಿತವು ಎಲ್ಲಾ ಕಡೆಯ ಒಂದು ದೊಡ್ಡ ಸಮಸ್ಯೆಯಾಗಿದ್ದು, ಇದರಿಂದ ಗಂಡ-ಹೆಂಡಿರ ಜಗಳ ಉಲ್ಬಣಗೊಂಡು ಬಾಲ ಕಾರ್ಮಿಕ ಸಮಸ್ಯೆಗೆ ಎಡೆಮಾಡಿಕೊಡುತ್ತದೆ.

ಸರ್ಕಾರೇತರ ಸಂಸ್ಥೆಗಳು ಸ್ವಯಂಸೇವಾ ಸಂಸ್ಥೆಗಳಾಗಿರುವುದರಿಂದ ಸರ್ಕಾರಿ ಉದ್ಯೋಗಿಗಳಿಗೆ ಅನ್ವಯವಾಗುವಂತೆ ಆಚಾರ ಸಂಹಿತೆ ಅವರಿಗೆ ಅನ್ವಯವಾಗುವುದಿಲ್ಲ. ಆದರೆ ಯಾವುದೇ ಸ್ವಯಂ ಸೇವಾ ಸಂಸ್ಥೆಯ ಚಟುವಟಿಕೆಗಳನ್ನು ಕಾಲದಿಂದ ಕಾಲಕ್ಕೆ ಮೌಲ್ಯಮಾಪನ ಮಾಡಬೇಕಾದ ಅಗತ್ಯವಿರುತ್ತದೆ. ದಾನಿಗಳಿಂದ ಸಹಾಯ ಪಡೆಯುವುದರ ಜೊತೆಗೆ ವಿದೇಶಿ ಮೂಲಗಳಿಂದ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಸಹಾಯ ಪಡೆಯುವಂತಯಹ ಸ್ವಯಂ ಸೇವಾ ಸಂಸ್ಥೆಗಳು ಲೆಕ್ಕಪತ್ರ

ನಿರ್ವಹಣೆಯಲ್ಲಿ ಕಾನೂನಿನ ಚೌಕಟ್ಟಿಗೆ ಬದ್ಧರಾಗಿರಬೇಕು. ಪ್ರಸ್ತುತ ವಿವಿಧ ಉದ್ದೇಶಗಳನ್ನು ಮುಂದು ಮಾಡಿಕೊಂಡು ಕಾರ್ಯಪ್ರವೃತ್ತವಾಗಿವೆ. ಇನ್ನೂ ಅನೇಕ ಸಂಸ್ಥೆಗಳು ಸಾರ್ವಜನಿಕರಿಂದ ದೂರವಾಗಿ ಉಳಿದಿವೆ. ಇಂತಹ ಸಂಸ್ಥೆಗಳನ್ನು ಸರ್ಕಾರದ ನಿಯಮಗಳಿಗೆ ಒಳಗುಮಾಡಬೇಕು ಅಥವಾ ಅಂತಹ ಸಂಸ್ಥೆಯನ್ನು ರದ್ದು ಮಾಡಬೇಕು .ಆದರೂ ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರಿ ಅಧಿಕಾರಿಗಳ ಸ್ಪರ್ಧಿಗಳೆಂದು ಭಾವಿಸಲಾಗದು ಸ್ವಯಂ ಪ್ರೇರಣೇಯಿಂದ ದುಡಿಯುವವರಾದ್ದರಿಂದ ಯಾವುದೇ ಬಿಗಿ ನಿಯಮಾವಳಿ ಅಥವಾ ನಿರ್ಬಂಧಕ್ಕೆ ಒಳಪಟ್ಟವರಾಗಿರುವುದಿಲ್ಲ ಸರ್ಕಾರವು ತನ್ನ ಕಾರ್ಯಕ್ರಮಗಳನ್ನು ಒಂದು ವಾಹಿನಿಯಲ್ಲಿ ನಡೆಸಿ ಹಣಕಾಸಿನ ಸಹಾಯ ನೀಡುವ ಮಟ್ಟಿಗೆ ಸ್ವಯಂ ಸೇವಾ ಸಂಸ್ಥೆಗಳು ಉತ್ತರ ನೀಡಬೇಕಾಗುತ್ತದೆ. ಹಣ ಕಾಸಿನ ದುರ್ಬಳಕೆಯಾದರೆ ಅದನ್ನು ಕೇಳುವ ಹಕ್ಕು ಸಾರ್ವಜನಿಕರಿಗೆ ಇರುತ್ತದೆ. ಅವರ ಜೀವನ ಉತ್ತಮಪಡಿಸಲು ಸಹಾಯವಾಗುವಂತ ಆರೋಗ್ಯ , ಶಿಕ್ಷಣ , ಆಶ್ರಯದಂತಹ ಕಾರ್ಯಕ್ರಮಗಳಿಗೆ ಹಣ ವಿನಿಯೋಗವಾಗುವುದು ಸಾಮಾನ್ಯ ಆದರೆ ಬುಡಕಟ್ಟು ಅಭಿವೃದ್ಧಿಯಲ್ಲಿ ಎಷ್ಟರಮಟ್ಟಿಗೆ ಕೆಲಸಗಳು ನಡಿದಿದೆ ಮತ್ತು ಬುಡಕಟ್ಟು ಮೇಲ್ವಿಚಾರಣಾ ಸಂಸ್ಥೆಗಳು ಮತ್ತು ಬುಡಕಟ್ಟೇತರ ಮೇಲ್ವಿಚಾರಣಾ ಸಂಸ್ಥೆಗಳು ಯಾವ ಯಾವ ರೀತಿ ಕೆಲಸ ಮಾಡುತ್ತಿವೆ ಎಂಬುದನ್ನು ತಿಳಿಯುವ ಅಗತ್ಯವಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಎಂಬತ್ತು ನೋಂದಾಯಿತ ಸ್ವಯಂ ಸೇವಾ ಸಂಸ್ಥೆಗಳಿವೆಯೆಂದು ತಿಳಿದು ಬರುತ್ತದೆ. ಅವು ಎಷ್ಟರಮಟ್ಟಿಗೆ ಸಮಾಜದ ಅಭಿವೃದ್ಧಿ, ಬುಡಕಟ್ಟು ಅಭಿವೃದ್ಧಿಯಲ್ಲಿ ಪಾತ್ರ ವಹಿಸುತ್ತವೆ ಎಂಬುದನ್ನು ಕೆಲವೊಂದು ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ:-**

ಭಾರತವು ಸಂಪದ್ಭರಿತ ರಾಷ್ಟ್ರ. ಈ ರಾಷ್ಟ್ರವನ್ನು ಡಚ್ಚರು, ಪೋರ್ಚಗೀಸರು, ಫ್ರೆಂಚರು, ಇಂಗ್ಲೀಷರು, ನಮ್ಮ ರಾಷ್ಟ್ರದ ಸಂಪತನ್ನು ಕೊಳ್ಳ ಹೊಡೆಯುತ್ತಾ ಸಾಗಿದರು. 1857 ರ ದಂಗೆಯ ನಂತರ ಸ್ವಲ್ಪ ವಿರೋಧ ಕಂಡು ಬಂದಿತಾದರು ಅವರ ದೇಶವನ್ನು ಅವರಿಗೆ ಬಿಟ್ಟು ಕೊಡುವ ನಿರ್ಧಾರಕ್ಕೆ ಬರಲು ಶತಮಾನಗಳೇ ಕಳೆದು ಹೋದವು. ಅದಕ್ಕೂ ಮೊದಲು ನಮ್ಮ ದೇಶವನ್ನು ಅರಿಯಲು ಮೂರು ವರ್ಗದ ಜನರು ಭಾರತಕ್ಕೆ ಬಂದಿದ್ದರು. ಅದರಲ್ಲಿ ಮೊದಲೆರಡು ವರ್ಗದ ಜನರು ಇಲ್ಲಿ ನೆಲೆ ನಿಲ್ಲಲು ಸಾಧ್ಯವಾಗಲಿಲ್ಲ ನಂತರ ಬಂದ ಮಿಶನರಿಗಳು ಇಲ್ಲಿ ಬಂದು ಪ್ರತಿಯೊಂದು ಹಂತದ ಜನರನ್ನು ತಲುಪಲು ಯಶಸ್ವಿಯಾದರು. ಈ ಮಿಶನರಿಗಳು ಇಂಗ್ಲೀಷರ ರಾಯಭಾರಿಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ಇವುಗಳು ಇಲ್ಲಿನ ಮಾಹಿತಿಗಳನ್ನು ವಿದೇಶಿಯರಿಗೆ ತಲುಪಿಸುವುದೇ ಇವರ ಮುಖ್ಯಉದ್ದೇಶವಾಗಿತ್ತು. ಇಂಥಹ ಮಿಶನರಿಗಳಿಗೆ ತರಬೇತಿ ಕೊಡುತ್ತಿದ್ದ ಇಂಗ್ಲೀಷರ ' ಮೇಲ್ವವರ್ಗದ ಜನರು ಅಲ್ಲಿನ ಕೆಳವರ್ಗದ ಜನರಿಗೆ ತರಬೇತಿಕೊಟ್ಟು ಇಲ್ಲಿ ಮಿಶನರಿಗಳನ್ನು ನಡೆಸಲು ನೇಮಿಸುತ್ತಿದ್ದರು.

ಅಂತವರಲ್ಲಿ ವೆರಿಯರ್ ಎಲ್ವಿನ್ ಕೂಡ ಒಬ್ಬರು. ಈ ಮಿಶನರಿಗಳು ಮೊದಲಿಗೆ ಬಡವರ್ಗದ ಜನರನ್ನು ಬೇಟಿ ಮಾಡಿ ಅವರ ಆರೋಗ್ಯ, ಆಹಾರದ ಬಗ್ಗೆ ಜಾಗೃತಿ ಮೂಡಿಸಿ ಇವೆರಡನ್ನು ಅವರಿಗೆ ಒದಗಿಸುತ್ತಿದ್ದರು. ಇದರಿಂದ ಪ್ರಭಾವಗೊಂಡವರು ಆ ಧರ್ಮದ ಮೇಲೆ ಆಸಕ್ತಿ ತೋರಿಸುತ್ತಾ ಹೊರಟರು. ಇದನ್ನೆ ಗುರಿಯಾಗಿಟ್ಟುಕೊಂಡ, ಕೆಲವು ಮಿಶನರಿಗಳು ಹಿಂದೂಗಳನ್ನು ಮತಾಂತರ ಮಾಡಲು ಮುಂದಾದರೂ ನಮ್ಮ ದೇಶದ ಕೆಳವರ್ಗದ ಮುಗ್ಧ ಜನರು ಯಾರು ಮೂಲಭೂತ ಅವಶ್ಯಕತೆಗಳನ್ನು ಪೂರೈಸುತ್ತಾರೋ ಅವರಕಡೆ ವಲವು ತೋರಲು ಶುರುಮಾಡಿದರು, ಇಂತಹ ಉದ್ದೇಶವನ್ನೆ ಇಟ್ಟುಕೊಂಡು ಬಂದ ವೆರಿಯರ್ ಎಲ್ವಿನ್ ಇಲ್ಲಿನ ಬಡವರ್ಗದ ಜನರನ್ನು ನೋಡಿ, ಬುಡಕಟ್ಟು ಸ್ಥಿತಿಗತಿಯನ್ನು ಅರ್ಥಮಾಡಿಕೊಂಡು ಮಾಡಿ ಅವರು ಪ್ರಮಾಣಿಕವಾಗಿ ಸಮಾಜ ಸೇವೆಯಲ್ಲಿ, ಮುಂದಾದರು ಇದರಿಂದ ವಿದೇಶಿಯರ ನಿಂದನೆಗೂ ಗುರಿಯಾದರೂ ಮತ್ತು ಬರುಬರುತ್ತಾ ಈ ಮಿಶನರಿಗಳ ಪ್ರಭಾವದಿಂದ ಸ್ವಯಂ ಸೇವಾ ಸಂಸ್ಥೆಗಳು ಹುಟ್ಟಕೊಂಡವು.

ಕರ್ನಾಟಕದಲ್ಲಿ ಸುಮಾರು 600 ಸ್ವಯಂ ಸೇವಾ ಸಂಸ್ಥೆಗಳಿದ್ದು, ಇವರು ಅನೇಕ ಗುರಿ ಉದ್ದೇಶಗಳನ್ನು ಹೊಂದಿರುತ್ತವೆ. ಅವುಗಳಲ್ಲಿ , ಮುಖ್ಯವಾದವುಗಳೆಂದರೆ ಶೈಕ್ಷಣಿಕ ಪ್ರಗತಿ, ಮಕ್ಕಳಲ್ಲಿ, ವಯಸ್ಕರಲ್ಲಿ ಮತ್ತು ಮದ್ಯಮ ವರ್ಗದ ಜನರಲ್ಲಿ ಮತ್ತು ಆರ್ಥಿಕ ಪ್ರಗತಿ ಸಮುದಾಯ ಮಟ್ಟದಲ್ಲಿ, ನಗರ ಮಟ್ಟದಲ್ಲಿ, ಯೋಜನೆಯ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ, ಹೋಬಳೀ ಮಟ್ಟದಲಿ, ಮತ್ತು ಆರೋಗ್ಯದ ಪ್ರಗತಿಯಲಿ, ಮಗುವಿನ ಲಸಿಕೆಗಳಿಂದ ಹಿಡಿದು ವೃದ್ದರ ಆಶ್ರಮದ ವರೆಗೆ ಸಮುದಾಯದ ಪ್ರತಿವರ್ಗದ ಆರೋಗ್ಯವನ್ನು ಗಮನಿಸಲಾಗುತ್ತಾದೆ.

ಶಿಕ್ಷಣ ಆರೋಗ್ಯ ಪರಿಸರದ ಜಾಗೃತಿ ಉದಾಹರಣೆಗೆ ಮೂಡನಂಬಿಕೆಗಳ ನಿರ್ಮೂಲನೆ ಕುರಿತು ಸಾಮಾನ್ಯ ಜನತೆಯಲ್ಲಿ ಅರಿವನ್ನು ಉಚಿಟುಮಾಡುವುದು ಈ ಸಂಬಂಧ ಸಮುದಾಯಗಳ ಜೊತೆ ಬೆರತು ಅವರಿಗೆ ಮೂಢನಂಬಿಕೆಗಳ ಆಚರಣೆಯಿಂದ ಉಂಟಾಗುವ ದುಷ್ಪರಿಣಾಮಗಳನ್ನು ಕುರಿತು ಜಾಗೃತಿ ತರಬೇತಿ ಶಿಬಿರಗಳಲ್ಲಿ ತಿಳಿಸಿಕೊಡುವುದಲ್ಲದೆ ಪ್ರಾಯೋಗಿಕವಾಗಿ ಅವರನ್ನು ಒಳಗುಮಾಡಿಕೊಂಡು ಅದರ ನಿಜವಾದ ಉದ್ದೇಶವನ್ನು ತಿಳಿಸಿಕೊಡುತ್ತಾ ಜನ ಸಾಮಾನ್ಯರ ಮನಸ್ಸನ್ನು ಚಿತನೆಗೆ ಹಚ್ಚುವಂತೆ ಮಾಡುತ್ರಾರೆ. ಇದರಿಂದ ಒಮ್ಮೆ ವಿಫಲವಾದರೂ ಎರಡು ಮೂರು ಸಾರಿ ಪ್ರಯತ್ನ ಮಾಡುವಷ್ಟರಲ್ಲಿ ಜಾಗೃತರಾಗುತ್ತಾರೆ. ಇಂತಹ ಕ್ರಮವನ್ನು ಹಲವಾರು ಹಂತಗಳಲ್ಲಿ ಅಂದರೆ ಬರಹದ ಮೂಲಕ, ತರಬೇತಿ ಮೂಲಕ ಪ್ರಚಾರ ಪಡಿಸುವುದರಿಂದ ಹೆಚ್ಚು ಪರಿಣಾಮಕಾರಿಯಾಗಿ ಮನಸ್ಸನ್ನು ನಾಟುತ್ತದೆ.

ಕ್ರೈಸ್ತ ಮಿಶನರಿಗಳ ಮೂಲಕ ಸ್ವಯಂ ಸೇವಾ ಸಂಸ್ಥೆಗಳು ಭಾರತದಲ್ಲಿ ಅಸ್ತಿತ್ವಕ್ಕೆ ಬಂದು ಎರಡು ಶತಮಾನಗಳೇ ಕಳೆದಿವ ಆದರೆ ಸ್ಥಳೀಯ ಮಟ್ಟದಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದು ನೂರು ವರ್ಷಗಳು ದಾಟಿಲ್ಲ, ಈ ಸ್ವಯಂ ಸೇವಾ ಸಂಸ್ಥೆಗಳು ತಾವು ಎಷ್ಟೆಲ್ಲಾ

ಗುರಿಉದ್ದೇಶಗಳನ್ನು ಹೊಂದಿದ್ದರೂ ಆದರೆ ಅವರ ಕೆಲಸಮಾತ್ರ ಸೀಮಿತ ವರ್ಗ, ಸೀಮಿತ ಸಮುದಾಯ, ಮತ್ತು ಸೀಮಿತ ಕ್ಷೇತ್ರಕ್ಕೆ ಒಳಗಾಗಿದೆ. ಇದಕ್ಕೆ ಕಾರಣ ಅವರು ನೀರಿಕ್ಷಸುತ್ತಿರುವ ಸರ್ಕಾರ ಮತ್ತು ವಿದೇಶಿ ಅನುದಾನವಾಗಿದೆ. ಆದರೆ ಯಾವುಂದು ಸ್ವಯಂ ಸೇವಾ ಸಂಸ್ಥೆಗಳು ನೂರಕ್ಕೆ ನೂರರಷ್ಟು ಸಮಾಜ ಸೇವೆಯಯಲಿ, ತೊಡೆಗಿಲ್ಲ.

ಮುಖ್ಯವಾಗಿ ನನ್ನ ಅಧ್ಯಾಯಿಸಿದ ಉದ್ದೇಶವೆನೆಂದರೆ ಇಂತಹ ಸ್ವಯಂ ಸೇವಾ ಸಂಸ್ಥೆಗಳು ಇಷ್ಟಲ್ಲಾ ಗುರಿ ಉದ್ದೇಶಗಳನ್ನು ಹೊಂದಿದ್ದರೂ ತಮ್ಮ ಕಾರ್ಯವನ್ನು ಸೀಮಿತಗೊಳಿಸ ಕೊಂಡಿರುವುದೇಕೆ ಮತ್ತು ತಾವು ಮಾಡಿರುವ ಕಾರ್ಯಗಳು ಎಷ್ಟರ ಮಟ್ಟಿಗೆ ಸಮುದಾಯನ್ನು ಸುಧಾರಿಸಿದೆ. ತಾವು ಮಾಡಿರುವ ಕೆಲಸ ಪರಿಣಾಮಕಾರಿ ಹೌದೊ ಅಥವ ಅಲ್ಲಿದೋ ಎಂಬುದನ್ನು ತಿಳಿಯುವುದು ಈ ನನ್ನ ಅದಾಯನದ ಉದ್ದೇಶವಾಗಿದೆ.

<u>ಅಧ್ಯಾಯನ ವ್ಯಾಪ್ತಿ :</u>

ಬುಡಕಟ್ಟು ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಎಂಬ ವಿಷಯ ಕುರಿತು ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಾಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು 30 ಬುಡಕಟ್ಟುಗಳು ವಾಸಿಸುತ್ತಿದ್ದು ಕೇವಲ 3 ಬುಡಕಟ್ಟುಗಳು ಮಾತ್ರ ಅಧಿಕ ಸಂಖೆಯಲ್ಲಿಸ ನೆಲೆಸಿರುವುದನ್ನು ಕಾಣುತ್ತೇವೆ. ಅವುಗಳೆಂದರೆ ನಾಯಕ, ಮೇದಾರ ಮತ್ತು ಹಕ್ಕಿಪಿಕ್ಕಿ ಬುಡಕಟ್ಟುಗಳು ಈ ಬುಡಕಟ್ಟುಗಳ ಅಭಿವೃದ್ದಿಗೆ ಸ್ವಯಂ ಸೇವಾ ಸಂಸ್ಥೆಗಳು ಎಷ್ಟರ ಮಟ್ಟಿಗೆ ಕಾರ್ಯಕ್ರಮ ರೂಪಿಸಿವೆ ಎಂಬುದನ್ನು ಕಂಡುಕೊಳ್ಳಲು ತಾಲೂಕಿಗೆ 2 ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ದುಕೊಳ್ಳಲಾಗಿದೆ.

<u>ಅಧ್ಯಯನ ವಿಧಾನ</u>

**ಪ್ರಶ್ನಾವಳಿ ವಿಧಾನ :**

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಸೂಕ್ತವಾಗಿ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿಕೊಳ್ಳಲಾಗಿದೆ, ಅಲ್ಲದೆ ಸಮುದಾಯದ ಅಥವಾ ಸಂಸ್ಥೆಗಳಿಗೆ ಭೇಟಿ ಮಾಡಿ ವಾಸ್ತವಿಕ ಸಮಸ್ಯೆಗಳನ್ನು ತಿಳಿದು ಮಾಹಿತಿಯನ್ನು ಕ್ರೂಢಿಕರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಸಂದರ್ಶನಾ ವಿಧಾನ :** ಅಧ್ಯಯನ ವಿಷಯಕ್ಕೆ ಪೂರಕವಾಗಿ ವಾಸ್ತವ ಮಾಹಿತಿಯನ್ನು ಪಡೆಯಲು ಸಂಬಂಧಪಟ್ಟ ಸಂಸ್ಥೆ ಮತ್ತು ಸಮುದಾಯಗಳ ಪ್ರತಿನಿದಿಗಳನ್ನು ನಾರವಾಗಿ ಸಂದರ್ಶನಮಾಡಿ ವಿಷಯಗಳನ್ನು ಚರ್ಚಿಸುವುದರಮೂಲಕ ಸತ್ಯಕ್ಕೆ ಹತ್ತಿರವಾದ ಸಂಗತಿಗಳನ್ನು ಸಂಗ್ರಹಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗುವುದು

**ಸಹಭಾಗಿತ್ವ ವಿಧಾನ :** ಬುಡಕಟ್ಟುಗಳ ಅಭಿವೃದ್ಧಿಯಲ್ಲಿ ಸಂಸ್ಥೆಗಳ ಪಾತ್ರ ಏನೆಂಬುದನ್ನು ತಿಳಿಯಲು ನೇರವಾಗಿ ಅವಲೋಕಿಸುವುದು ಪ್ರಮುಖವಾದುದು ಆಹಿನ್ನೆಲೆಯಲ್ಲಿ ಸಂಸ್ಥೆಯ ಕಾರ್ಯವೈಕರಿಯನ್ನು ಮತ್ತು ಸಮುದಾಯದ ಆಸಕ್ತಿಯನ್ನು ಸಹಭಾಗಿತ್ವದ ಮೂಲಕ ಅರಿತು ಅಧ್ಯಯನದಲ್ಲಿ ಚರ್ಚಿಸಲಾಗುವುದು.

**ಅವಲೋಕನ ವಿಧಾನ :** ಉದ್ದೇಶಿತ ಅಧ್ಯಾಯನಕ್ಕಾಗಿ ಮೇಲೆ ಹೇಳಿದ ವಿಧಾನಗಳ ಜೊತೆಗೆ ಸ್ವಯಂ ಸೇವಾ ಸಂಸ್ಥೆಗಳಲ್ಲಿ, ಬುಡಕಟ್ಟು ಅಭಿವೃದ್ಧಿಯನ್ನು ವೀಕ್ಷಿಸುವುದರ ಮೂಲಕ ಅಭಿವೃದ್ಧಿ ಕಾರ್ಯಗಳನ್ನು ಮತ್ತು ಸಂಸ್ಥೆ ತೊಡಗಿಸಕೊಳ್ಳವಿಕೆಯನ್ನು ಅರ್ಥೈಸಿಕೊಳ್ಳುವುದು ಸಾಧ್ಯವಿದೆ. ಈ ವಿಧಾನ ಪ್ರಧಾನ ಅಂಶವಾಗಿದೆ.

**ಐತಿಹಾಸಿಕ ವಿಧಾನ :** ಈ ವಿಷಯವನ್ನು ಕುರಿತು ಈ ಮೊದಲೇ ನೀಡಿರಬಹುದಾದ ಅಧ್ಯಯನಗಳನ್ನು ಪರಮರ್ಶಿಸುವುದರ ಮೂಲಕ, ಅದರ ಇತಿಹಾಸವನ್ನು ದಾಖಲಿಸುವುದು ಸಾಧ್ಯವಿದೆ. ಆ ಕಾರಣದಿಂದ ಐತಿಹಾಸಿಕ ವಿಧಾನ ಬಹಳ ಮುಖ್ಯವಾದುದು. ಪ್ರಸ್ತುತ ಅಧ್ಯಯನಕ್ಕೂ ಮೊದಲು ಆ ಕುರಿತು ಕಟ್ಟಿರಬಹುದಾದ ಅಧ್ಯಾಯಗಳನ್ನು ಪರಿಶೀಲಿಸಿ / ಪರಾಮರ್ಶಸುವುದು ಬಹಳ ಮುಖ ಏಕೆಂದರೆ ಮುಂದಿನ ಅಧ್ಯಾಯದಲ್ಲಿ, ನಾವು ಮಾಡಬೇಕಾಗುವ ಬಗ್ಗೆ ಅನೇಕ ಒಳವೂ ಮತ್ತು ಮಾಹಿತಿಗಳು ಲಭ್ಯವಾಗಿದೆ.

**ಅಂಕಿ–ಸಂಖ್ಯಾ ವಿಧಾನ :** ಯಾವುದೇ ಅಧ್ಯಯನದಲ್ಲಿ ನಿಖರತೆ ಕಾಣಬೇಕಾದರೆ ಅದು ಯಾವುದಾದರೂ ಒಂದು ಮಾದರಿಯ ಅಂಕಿ ಸಂಖ್ಯಾ ವಿಧಾನವನ್ನು ರೂಢಿಸಿಕೊಂಡಿರಬೇಕು. ಅದೇ ಈ ಆಧ್ಯಯನದಲ್ಲಿ ಅಭಿವೃದ್ಧಿಯನ್ನು ಕುರಿತು ಅಂಕಿ ಸಂಖ್ಯೆಯನ್ನು ನೀಡುವಲ್ಲಿ ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

# ಅಧ್ಯಾಯ.2
## ಬಳ್ಳಾರಿ ಜಿಲ್ಲೆಯ ಬುಡಕಟ್ಟುಗಳು.

ಇಂದು ನಮ್ಮ ಭಾರತ ದೇಶದಲ್ಲಿ ಕೋಟ್ಯಾಂತರ ಜನರು ತಮ್ಮ ಉಪಜೀವನಕ್ಕಾಗಿ ದಟ್ಟವಾದ ಬೆಟ್ಟ-ಗುಡ್ಡಗಾಡು ಪ್ರದೇಶಗಲ್ಲಿ ಹಣ್ಣು-ಹಂಪಲು, ಗಡ್ಡೆ-ಗೆಣಸು, ಪ್ರಾಣಿ-ಪಕ್ಷಿಗಳನ್ನು ಉಪಬೋಗಿಸಿ ಜೀವನ ನಡೆಸುವಂತಹ ಬುಡಕಟ್ಟು ಜನಾಂಗದವರ ಅಭಿವೃದ್ಧಿಯ ಬಗ್ಗೆ ಚಿಂತಿಸುವುದು ಬಹು ಮುಖ್ಯವಾದ ವಿಷಯವಾಗಿದೆ. ಈ ಬುಡಕಟ್ಟುಗಳು ಶತ ಶತಮಾನಗಳಿಂದಲೂ ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ನಾಗರಿಕ ಸಮಾಜದಿಂದ ತಮ್ಮ ತನವನ್ನು ಕಾಪಾಡಿಕೊಂಡು ಬಂದಿರುವ ನಮ್ಮ ಪ್ರಾಚೀನತೆಯ ಕುರುಹುಗಳಾಗಿವೆ.

ಬುಡಕಟ್ಟುಗಳು ಒಂದು ಸ್ಥಳದಲ್ಲಿ ಸ್ಥಿರವಾಗಿ ನಿಂತು ತಮ್ಮ ಜೀವನವನ್ನು ನಡೆಸುವ ಜನಾಂಗದವರೆಲ್ಲಾ ಇವರು ಕೇವಲ ಬೆಟ್ಟು-ಗುಡ್ಡಗಳಲ್ಲಿ ವಾಸವಾಗಿದ್ದು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆಮಾಡುತ್ತಿದ್ದರು. ಬೇಟೆ ಮತ್ತು ಆಹಾರ ಸಂಗ್ರಹಣೆ ಅವರ ಪ್ರಮುಖ ಕಾರ್ಯವಾಗಿತ್ತು. ಈ ಜನಾಂಗದವರು ಮುಂದೆ ಕೃಷಿಯನ್ನು ರೂಪಿಸಿಕೊಂಡರು. ಆದರೆ ಇದು ಶಾಶ್ವತವಾಗಿ ಒಂದೇ ಸ್ಥಳದಲ್ಲಿ ಮಾಡುವುದದಾಗಿರಲಿಲ್ಲ ಬದಲಾಗಿ ಅವರು ಕುಮರಿ ಬೇಸಾಯ ಮಾಡುತ್ತಾ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದರು. ಭಾರತದಲ್ಲಿ ಹೇರಳವಾಗಿ ಸಿಗುತ್ತಿದ್ದ ಸಾಂಬಾರು ಪದಾರ್ಥಗಳ ಆಸೆಯಿಂದ ಯುರೋಪಿಯನ್ನರು ತಮ್ಮ ವಸಾಹತುಗಳನ್ನು ಸ್ಥಾಪಿಸಿ ತಮ್ಮ ಹಿಡಿತವನ್ನು ಸ್ಥಾಪಿಸಿಕೊಳ್ಳತೊಡಗಿದರು. ಇದಕ್ಕೆ ವಾಸ್ಕೋಡಿಗಾಮನು ಕಂಡುಹಿಡಿದ ಜಲಮಾರ್ಗವು ಒಂದು ಪ್ರಮುಖ ದಾರಿಯಾಯಿತು. ಈ ಹಂತದಲ್ಲಿ ಭಾರತಕ್ಕೆ ಬಂದ ಯೂರೋಪಿಯನ್ನರು. ಅದರಲ್ಲಿಯೂ ಪ್ರಮುಖವಾಗಿ ಬ್ರಿಟೀಷರು ಮೊದಲು ಇಲ್ಲಿನ ಜನರ ಸ್ಥಿತಿಗತಿಗಳನ್ನು ತಿಳಿಯಲು ಪ್ರಾರಂಭಿಸಿದರು. ಅಂದರೆ ಇಲ್ಲಿನ ವೇದಗಳ, ಉಪನಿಷತ್ತುಗಳ ಮಹಾಕಾವ್ಯಗಳ, ಶಾಸ್ತ್ರಗ್ರಂಥಗಳ ಮೂಲಕ ಜನರ ಸ್ಥಿತಿಗಳನ್ನು ತಿಳಿದುಕೊಂಡರು. ಈ ಮೂಲಕ ತಮ್ಮ ಆದಿಪತ್ಯವನ್ನು ಸಾಧಿಸುವುದು ಅವರ ಪ್ರಮುಖ ಗುರಿಯಾಗಿತ್ತು ಆದರೆ ನಾಗರೀಕತೆಯಿಂದ ದೂರವಿದ್ದ ಬುಡಕಟ್ಟು ಸಮುದಾಯಗಳನ್ನು, ಅವರ ಸಂಸ್ಕೃತಿಯನ್ನು ತಿಳಿಯಲು ಯಾವುದೇ ಬರಹಗಳಿರಲಿಲ್ಲ. ಮತ್ತು ಅವರಿಗೆ ಬೇಕಾಗಿರುವ ಸಾಂಬಾರು ಪದಾರ್ಥಗಳು ಹೆಚ್ಚಿನದಾಗಿ ಆ ಪ್ರದೇಶಗಳಿಂದಲೇ ದೊರಕುತ್ತಿದ್ದರಿಂದ ಬುಡಕಟ್ಟು ಸಮುದಾಯಗಳ ಅಧ್ಯಯನ ಮಾಡುವುದು ಅನಿವಾರ್ಯವಾಯಿತು. ಆದ್ದರಿಂದ ವಿವಿಧ ಪಂಗಡಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಬ್ರೀಟಿಷ್ ಸರ್ಕಾರ ಪ್ರೋತ್ಸಾಹ ನೀಡಿ ಮಾನವ ವಿಜ್ಞಾನಿಗಳನ್ನು ಈ ಕಾರ್ಯಕ್ಕೆ ಮೇಮಿಸಿತು ಒಂದೊಂದು ರಾಜ್ಯಗಳಲ್ಲಿಯೂ ಇರುವ ಎಲ್ಲಾ ಬುಡಕಟ್ಟುಗಳ ಬಗ್ಗೆ ಸ್ಥೂಲವಾಗಿ ಅಧ್ಯಯನವನ್ನು ಕೈಗೊಳ್ಳಲಾಯಿತು. ಇದರಿಂದಾಗಿ ಹಲವಾರು ಉಪಯುಕ್ತ ಮಾಹಿತಿಗಳು ದೊರಕಿದವು ಮತ್ತು ಅವು ಪುಸ್ತಕ ರೂಪದಲ್ಲಿಯೂ ಕೂಡ ಬೆಳಕಿಗೆ ಬಂದವು. ಈ ಅಧ್ಯಯನದ ಆನಂತರ

ಗುಡ್ಡಗಾಡು ಪ್ರದೇಶಗಳನ್ನು ಆಕ್ರಮಿಸಲು ತಮ್ಮ ವಸಾಹತುಗಳನ್ನು ಸ್ಥಾಪಿಸಲು ಆರಂಭಿಸಿದರು. ಈ ವಸಾಹತುಗಳನ್ನು ಸ್ಥಾಪಿಸಿ ವ್ಯಾಪಾರವನ್ನು ಎಂದು ಆರಂಭಿಸಿದರೋ ಅಂದಿನಿಂದ ಬುಡಕಟ್ಟು ಜನರ ಸ್ವಚ್ಛಂಧವಾದ ಬದುಕು ಅಸ್ತಿರಗೊಳ್ಳ ತೊಡಗಿತು. ಬ್ರಿಟಿಷರು ವಸಾಹತುಗಳನ್ನು ಸ್ಥಾಪಿಸಿದ ಪರಿಣಾಮವಾಗಿ ಕಾಡುಗಳೆಲ್ಲವೂ ತೋಟಗಳಾಗಿ ಪರಿವರ್ತಿತಗೊಂಡವು ಅಲ್ಲಿ ತೀವ್ರವಾದ ವ್ಯಾಪಾರದ ಪ್ರಕ್ರಿಯೆಗಳು ನಡೆದವು ಅಂತಹ ಸಂದರ್ಭದಲ್ಲಿ ಕೆಲವರು ಯುರೋಪಿಯನ್ನರ ಬೆನ್ನು ಹತ್ತಿ ಬಂದ ಭೂಮಾಲಿಕರಾದರು. ಬುಡಕಟ್ಟು ಜನರು ಗುಡ್ಡಗಾಡು ಪ್ರದೇಶಗಳಲ್ಲಿ ತಮ್ಮ ಜೀವನವನ್ನು ಸಾಗಿಸುವವರಾಗಿದ್ದರಿಂದ ಅವರು ಗಿಡಮರಗಳನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಮರಗಳನ್ನು ಪೂಜಿಸುತ್ತಿದ್ದರು. ಈ ಬುಡಕಟ್ಟು ಜನರಿಗೆ ಬ್ರೀಟಿಷರು ತಮ್ಮನ್ನು ಆಳುತ್ತಿದ್ದಾರೆ. ನಾವು ಅವರ ಗುಲಾಮರಗುತ್ತಿದ್ದೇವೆ ಎಂಬುದು ಅರಿವಿರಲಿಲ್ಲ ಸ್ವಾತಂತ್ರ್ಯ ಬಂದನಂತರ ಕಾಡುಗಳು ಬ್ರಿಟಿಷರು ಅಧೀನದಲ್ಲಿದ್ದವು ಎಂಬುದು ತಿಳಿದು ಬಂದಿತು.

ಸ್ವಾತಂತ್ರ್ಯ ಬಂದ ಆನಂತರ ಹಲವಾರು ಬುಡಕಟ್ಟುಗಳು ಸ್ಥಳಾಂತರವನ್ನು ಆರಂಭಿಸಿದರು. ಏಕೆಂದರೆ ಸರಕಾರಗಳು ಅರಣ್ಯಗಳನ್ನು ರಕ್ಷಿಸುವ ಸಲುವಾಗಿ ಅರಣ್ಯ ಕಾಯ್ದೆಗಳನ್ನು ರಚಿಸಿತು. ಈ ಇಲಾಖೆಯ ಕಾನೂನುಗಳು ಕಾಡಿನಲ್ಲಿ ವಾಸಿಸುವ ಬುಡಕಟ್ಟು ಜನರನ್ನು ಹಲವಾರು ಪ್ರಶ್ನೆಗಳನ್ನು ಹಾಕುವುದರ ಮೂಲಕ ಅವರನ್ನು ಸಂಕಷ್ಟ ಸ್ಥಿತಿಗೆ ತಮಪಿಸಿದವು. ಬುಡಕಟ್ಟು ಜನರಿಗೆ ತಮ್ಮ ಸ್ವಂತ ಆಸ್ತಿಯ ಪರಿಕಲ್ಪನೆಯೂ ಇರಲಿಲ್ಲ. ಹಾಗಾಗಿ ಅವರು ಒಂದು ಸ್ಥಳದಲ್ಲಿ ನಿಲ್ಲುತ್ತಿರಲಿಲ್ಲ. ಕೆಲವೊಂದು ಸಂದರ್ಭದಲ್ಲಿ ನಿಸರ್ಗದ ವಿವೇಕದಿಂದಲೇ ಅಥವಾ ಅನಾವೃಷ್ಟಿಯ ಕಾರಣದಿಂದಲೇ ಇವರು ವಲಸೆ ಬಂದಿರುವುದು ನಮಗೆ ತಿಳಿದು ಬರುತ್ತದೆ. ಹೀಗೆ ವಲಸೆ ಬಂದವರು ದೇಶದ ಕೆಲವು ರಾಜ್ಯಗಳಲ್ಲಿ ಚದುರಿ ಹೋದರು. ಹಾಗೇಯೇ ಕರ್ನಾಟಕದಲ್ಲಿಯೂ ಕೂಡ ಕೆಲವು ಬುಡಕಟ್ಟು ಪಂಗಡಗಳು ಬಂದು ನೆಲೆಸಿದವು. ಕರ್ನಾಟಕದಲ್ಲಿ ಸುಮಾರು 50 ಬುಡಕಟ್ಟುಗಳು ನೆಲೆಗಳು ಇರುವುದು ಕಂಡುಬರುತ್ತದೆ.

ಪ್ರಪಂಚದ ಯಾವುದೇ ಭಾಗದಲ್ಲಿ ಇರುವುದಕ್ಕಿಂತಲೂ ಹೆಚ್ಚು ಬುಡಕಟ್ಟು ಸಮುದಾಯಗಳು ಭಾರತದಲ್ಲಿ ಕಂಡು ಬರುತ್ತಾರೆ. ಎಂಬುದು ಗಮನಾರ್ಹ ಸಂಗತಿ ಭಾರತದಲ್ಲಿನ ಬುಡಕಟ್ಟುಗಳನ್ನು ಮುಖ್ಯವಾಗಿ 3 ಭಾಗಗಳಾಗಿ (ವಲಯಗಳೇ) ವಿಂಗಡಿಸಲಾಗಿದೆ.

1) ಉತ್ತರ ಮತ್ತು ಉತ್ತರ ಪೂರ್ವವಲಯ
2) ಕೇಂದ್ರೀಯ ಮತ್ತು ಮಧ್ಯವಲಯ
3) ದಕ್ಷಿಣವಲಯ

1991 ರ ಜನಗಣತಿಯ ಪ್ರಕಾರ ಭಾರತದಲ್ಲಿನ ಬುಡಕಟ್ಟು ಜನಸಂಖ್ಯೆಯ ಪ್ರಮಾಣ 6,77,58,380 ಇತ್ತು ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ 8 ರಷ್ಟು ಇದ್ದರು. ಈಗ 10 ಕೋಟಿಗೂ ಹೆಚ್ಚು ಬುಡಕಟ್ಟು ಜನಸಂಖ್ಯೆ ಇದೆ ಎಂದು ಅಂದಾಜಿಸಲಾಗಿದೆ.

ಕರ್ನಾಟಕದಲ್ಲಿ ಮೊದಲು 1903 ರಲ್ಲಿ ಕರ್ನಾಟಕದ ಬುಡಕಟ್ಟುಗಳನ್ನು ಕುರಿತ ಅಧ್ಯಯನ ಆರಂಭವಾಯಿತು. ಹೆಚ್.ವಿ. ನಂಜುಡಯ್ಯನವರು ಮೈಸೂರಿನಲ್ಲಿದ್ದು, ಬುಡಕಟ್ಟುಗಳನ್ನು ಕುರಿತು ಅಧ್ಯಯನ ಮಾಡಿದರು. ಬಳಿಕದಲ್ಲಿ ಅನಂತಕೃಷ್ಣಯ್ಯರವರು ಮುಂದುವರೆಸಿಕೊಂಡು ಹೋದದ್ದನ್ನು ಅವರ ಜೊತೆಯಲ್ಲಿಯೇ ಎಡ್ಗರ್ ಥರ್‌ಸ್ಟನ್ ಎನ್ನುವವರು ಕೂಡ ಇಲ್ಲಿಯ ಬುಡಕಟ್ಟುಗಳನ್ನು ಕುರಿತು ಅಧ್ಯಯನ ಮಾಡಿದರು. ಈ ಅಧ್ಯಯನದಲ್ಲಿ ಬುಡಕಟ್ಟುಗಳ ಪರಿಚಯವನ್ನು ಮಾಡಿಕೊಡುವಲ್ಲಿ ಹೆಚ್ಚುಫಲಕಾರಿಯಾಗಿದೆ.

ಕರ್ನಾಟಕವು ಭಾರತದ ಎಂಟನೆಯ ಅತೀ ದೊಡ್ಡ ರಾಜ್ಯವಗಿದೆ. 1991 ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆಯ ಶೇ 4.26 ರಷ್ಟು (19,15,691) ಬುಡಕಟ್ಟುಗಳು ವಾಸವಾಗಿರುವುದು ಕಂಡುಬರುತ್ತದೆ. ಇತ್ತೀಚಿನ ಅಧ್ಯಯನಕಾರರು ಹೆಚ್ಚಾಗಿ ಕರ್ನಾಟಕದ ಬುಡಕಟ್ಟುಗಳನ್ನು ಮಲೆನಾಡಿನ ಬುಡಕಟ್ಟುಗಳು ಕರಾವಳಿ ಬುಡಕಟ್ಟುಗಳು ಮತ್ತು ಬಯಲುಸೀಮೆಯ ಬುಡಕಟ್ಟುಗಳೆಂದು ಪ್ರಾದೇಶಿಕವಾಗಿ ವಿಭಜಿಸಿ ಅಧ್ಯಯನ ನಡೆಸುತ್ತಿದ್ದಾರೆ. ಬುಡಕಟ್ಟುಗಳ ಜನಸಂಖ್ಯೆಯಲ್ಲಿ ಅತ್ಯಂತ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಬುಡಕಟ್ಟು ಎಂದರೆ ನಾಯಕ ಬುಡಕಟ್ಟು ಅತೀ ಕಡಿಮೆ ಜನಸಂಖ್ಯೆ ಹೊಂದಿರುವ ಬುಡಕಟ್ಟು ಎಂದರೆ ಡುಬ್ಲ,

ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುವುದು ಅಥವಾ ಅಲೆಮಾರಿಗಳಾಗಿ ಜೀವನ ಸಾಗಿಸುವುದು ಬುಡಕಟ್ಟುಗಳ ಸಹಜ ಗುಣವಾಗಿದೆ. ಹಲವಾರು ಬುಡಕಟ್ಟುಗಳು ಬೇರೆ ಪ್ರದೇಶಗಳಿಂದ ಕರ್ನಾಟಕಕ್ಕೆ ಬಂದು ನೆಲೆಸಿವೆ. ಅಂಥವುಗಳಲ್ಲಿ ರಾಜಸ್ಥಾನ, ಗುಜರಾತ, ಮಹಾರಾಷ್ಟ್ರ, ಗೋವಾ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಕೇರಳ ಕಡೆಗಳಿಂದ ವಲಸೆಗೊಂಡು ಬಂದವುಗಳಾಗಿವೆ. ಈ ಬುಡಕಟ್ಟುಗಳ ವಲಸೆಯ ಕಾಲಾವಧಿ ಹಾಗೂ ಕಾರಣಗಳು ಬುಡಕಟ್ಟಿನಿಂದ ಬುಡಕಟ್ಟಿಗೆ ಭಿನ್ನವಾಗಿವೆ. ಈ ಹಿಂದೆಯೇ ತಿಳಿಸಿರುವಂತೆ ಕ್ಷೇಮ, ಆಂತರಿಕ ಕಲಹ ಮತ್ತು ಬೇಟೆ ಪಶುಪಾಲನೆ ಹಿನ್ನೆಲೆಯ ಸಹಜ ಅಲೆಮಾರಿ ಗುಣಗಳೇ ಇವರ ವಲಸೆಗೆ ಮೂಲ ಕಾರಣಗಳಾಗಿರುವ ಸಾಧ್ಯತೆಗಳಿವೆ. ಹೀಗೆ ಕರ್ನಾಟಕಕ್ಕೆ ವಲಸೆ ಬಂದ ಬುಡಕಟ್ಟುಗಳು ರಾಜ್ಯದ ನಾನಾ ಭಾಗಗಳಲ್ಲಿ ಅಂದರೆ ಜಿಲ್ಲೆಗಳಲ್ಲಿ ಚದುರಿದವು. ಹಾಗೆಯೇ ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಯಾಗಿರುವ ಬಳ್ಳಾರಿಯಲ್ಲಿಯೂ ಕೂಡ ಈ ಬುಡಕಟ್ಟು ಜನಾಂಗಗಳು ಇರುವುದು ಕಂಡು ಬರುತ್ತದೆ. ಎಂದು ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು 30 ಬುಡಕಟ್ಟುಗಳು ಇರುವುದು ತಿಳಿದು ಬರುತ್ತದೆ. ಇಲ್ಲಿಯೂ ಕೂಡ ನಾಯಕ ಬುಡಕಟ್ಟು ಜನಸಂಖ್ಯೆಯಲ್ಲಿ ಮೊದಲನೆಯ ಸ್ಥಾನವನ್ನು ಹೊಂದಿರುವುದು ಗಮನಾರ್ಹ ಸಂಗತಿ. ಹಲವಾರು ಈ ಬುಡಕಟ್ಟುಗಳ ಮಾತೃ ಭಾಷೆ ಕನ್ನಡವಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಮುಖ್ಯವಾಗಿ ನಾಯಕ, ಹಕ್ಕಿಪಿಕ್ಕಿ, ಮೇದ

ಬುಡಕಟ್ಟುಗಳನ್ನು ಹೆಚ್ಚಾಗಿ ಕಾಣಬಹುದು. ಹಕ್ಕಿಪಿಕ್ಕಿ ಬುಡಕಟ್ಟಿನ ಮೂಲಕಸುಬು ಹಕ್ಕಿಗಳನ್ನು ಹಿಡಿಯುವುದರಿಂದ ಇರವರನ್ನು ಹಕ್ಕಿಪಿಕ್ಕಿ ಎಂದು ಕರೆಯಲಾಗುವುದು. ಹಕ್ಕಿ ಎಂದರೆ ಪಕ್ಷಿಪಿಕ್ಕಿ ಎಂದು ಕರೆಯಲಾಗುತ್ತಿತ್ತು. ಪಿಕ್ಕಿ ಎಂದರೆ ಅದರ ಪ್ರತಿಧ್ವನಿರೂಪ ಇವರು ಗುಜರಾತ ರಾಜಸ್ಥಾನ ಮೂಲದಿಂದ ಆಂಧ್ರಪ್ರದೇಶದ ಮಾರ್ಗವಾಗಿ ಕರ್ನಾಟಕಕ್ಕೆ ಬಂದು ನೆಲೆಸಿರುವರು ಬಳ್ಳಾರಿಯಲ್ಲಿ ನಗರದ ಹರಿಶ್ಚಂದ್ರನಗರ, ಹೊಸಪೇಟೆ ತಾಲೂಕಿನ ಹೊಸಪೇಟೆ ನಗರದ ಊರಮ್ಮನ ಬಯಲು, ಕಾರಿಗನೂರು ಗ್ರಾಮ, ಕಂಪ್ಲಿ ಪಟ್ಟಣದ ಶಿಕಾರಿ ಕಾಲೋನಿ, ಸಾಣಾಪುರ ಗ್ರಾಮ ಇತ್ಯಾದಿ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಇವರ ಮಾತೃಭಾಷೆ ವಾಘರಿ. ಇವರು ಇತರರೊಂದಿಗೆ ಕನ್ನಡ, ತಮಿಳು,ತೆಲುಗು, ಮಲೆಯಾಳಂ, ಮತ್ತು ಹಿಂದಿ ಭಾಷೆಗಳನ್ನು ಬಳಸುವರು. 1991 ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಇವರ ಜನಸಂಖ್ಯೆ 3,382 ದಾಖಲಾಗಿದೆ. ಇದರಲ್ಲಿ ಶೇ 17.24 ರಷ್ಟು ನಗರವಾಸಿಗಳಾಗಿದ್ದಾರೆ. ಇನ್ನು ಬಳ್ಳಾರಿಜಿಲ್ಲೆಯಲ್ಲಿ ವೇದ ಬಡಕಟ್ಟು ಜನಾಂಗವೂ ಕೂಡ ಇರುವುದು. ಬಳ್ಳಾರಿ ಜಿಲ್ಲೆಯ ನಗರ ಪ್ರದೇಶ, ಹೊಸಪೇಟೆ, ಕಂಪ್ಲಿ ಮುಂತಾದ ತಾಲೂಕು ಪ್ರದೇಶಗಳಲ್ಲಿ ಈ ಬುಡಕಟ್ಟು ಇರುವುದು ತಿಳಿದು ಬರುತ್ತದೆ. ಇವರ ಮಾತೃ ಭಾಷೆ ಕನ್ನಡವಾಗಿದೆ. ಪಾರ್ಧಿ, ವ್ಯವಹಾರ ಭಾಷೆ ಇವರು ಪಾರಂಪರಿಕವಾಗಿ ಗೃಹಕರಕುಶಲ ಕಲೆಗಾರರು ಹಾಗೂ ಕೃಷಿಕರು ಇವರು ಬಿದಿರು ಬೆತ್ತದಿಂದ ಕಲಾತ್ಮಕವಾದ ಬಹುಪಯೋಗಿ ಸಾಧನಗಳನ್ನು ತಯಾರಿಸುವರು. ಇನ್ನು ನಾಯಕ ಬುಡಕಟ್ಟು ರಾಜ್ಯದ ಹಲವಾರು ಭಾಗಗಳಲ್ಲಿ ಇರುವುದು ಕಂಡುಬರುತ್ತದೆ.

ಇಂದಿನ ಜಾಗತೀಕರಣದ, ಖಾಸಗೀಕರಣ ಮತ್ತು ಕೈಗಾರಿಕೀಕರಣದ ಸಂದರ್ಭದಲ್ಲಿ ಹಲವಾರು ಬುಡಕಟ್ಟುಗಳನ್ನು ತಮ್ಮ ಮೂಲ ನೆಲೆಯಾದ, ಕಾಡುಗಳನ್ನು ಬಿಟ್ಟು ನಗರಪ್ರದೇಶಗಳಲ್ಲಿ ವಾಸವಾಗಿರುವುದು ಕಂಡುಬರುತ್ತದೆ. ಭಾರತ ದೇಶವು ವಿದೇಶಿ ಬಂಡವಾಳವನ್ನು ಆಶ್ರಯಿಸಿರುವುದರಿಂದ ಕಾಡುಗಳನ್ನು ಕೈಗಾರಿಕೆಗಳ ತಾಣಗಳಾಗಿ ಮಾರ್ಪಾಡಾಗಿರುವುದರಿಂದ ಅಲ್ಲಿ ವಾಸಿಸುತ್ತಿದ್ದ ಹಲವಾರು ಬುಡಕಟ್ಟು ಸಮುದಾಯಗಳು ಬದಲಾವಣೆಯನ್ನು ಕಾಣಬೇಕಾಯಿತು.

ಗಣಿಗಳ ನಾಡೆಂದೇ ಪ್ರಸಿದ್ಧಿಯನ್ನು ಪಡೆದಿರುವ ಬಳ್ಳಾರಿ ಜಿಲ್ಲೆಯ ಕೂಡ ಈ ಕೈಗಾರಿಕೀಕರಣಕ್ಕೆ ಹೊರತಿಗಿಲ್ಲ. ಇಲ್ಲಿ ಗಣಿಗಾರಿಕೆಯನ್ನು ಗುಡ್ಡಗಾಡು ಪ್ರದೇಶಗಳಲ್ಲಿಯೇ ಮಾಡುವುದರಿಂದಾಗಿ ಅಲ್ಲಿನ ಬುಡಕಟ್ಟು ಜನರು ನಗರಗಳಿಗೆ ವಲಸೆ ಬಂದು ನೆಲೆಸಿದ್ದಾರೆ ಮತ್ತು ಅವರು ಹಿಂದೂ ಸಂಸ್ಕೃತಿಯಲ್ಲಿರುವಂತೆಯೇ ಕೆಲವು ಪದ್ಧತಿಗಳನ್ನು ಬದಲಾಯಿಸಿಕೊಂಡಿದ್ದಾರೆ. ಕೆಲವು ಬುಡಕಟ್ಟುಗಳು ಒಂದೇ ಸ್ಥಳದಲ್ಲಿ ನೆಲೆನಿಂತು ತಮ್ಮದೇ ಆದ ಕೆಲವು ಹಳ್ಳಿಗಳನ್ನು ಅಥವಾ ಹಟ್ಟಿಗಳನ್ನು ನಿರ್ಮಿಸಿಕೊಂಡಿದ್ದಾರೆ. ಇವೂ ಕೂಡ ನಗರ ಪ್ರದೇಶಗಳಿಗೆ ಕೆಲವೇ ಕಿ.ಮೀ.ದೂರದಲ್ಲಿರುತ್ತದೆ. ಹಾಗಾಗಿ ಅವರೂ ಕೂಡ ಈ ನಗರೀಕರಣಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ವಲಸೆ

ಹೋಗುವಂತಹ ಬುಡಕಟ್ಟು ಸಮುದಾಯಗಳು ತುಂಬಾ ಕಡಿಮೆ ಇವೆ ಎಂದು ಹೇಳಬಹುದು ಏಕೆಂದರೆ ಹಲವಾರು ಬುಡಕಟ್ಟುಗಳು ಜಾತಿಗಳಾಗಿ ಪರಿವರ್ತನೆಗೊಂಡು ತಮ್ಮ ಸ್ವಂತಿಕೆಯನ್ನು ತೋರ್ಪಡಿಸುತ್ತಿವೆ. ಈ ಬುಡಕಟ್ಟುಗಳಲ್ಲಿ ಎಷ್ಟೇ ಬದಲಾವಣೆಗಳಾದರು ಕಂಡು ಬರುತ್ತಿದೆ. ಇಂದು ಪರಿಶಿಷ್ಟಜಾತಿ/ಪಂಗಡಗಳೆಂದು ಕರೆಯಲ್ಪಡುವ ಎಲ್ಲಾ ಜಾತಿವರ್ಗದವರೂ ಕೂಡ ಬುಡಕಟ್ಟು ಜನಾಂಗದವರೇ ಎಂದು ಹೇಳಬಹುದು. ಈ ಜಾತಿ/ಪಂಗಡಗಳು ಅಭಿವೃದ್ಧಿಯನ್ನು ಹೊಂದುವುದುರಿಂದ ದೇಶದ ಅಭಿವೃದ್ಧಿ ಸಾಧ್ಯವಾಗುತ್ತದೆ. ಹಾಗಾಗಿ ಸರಕಾರವು ಇಂದು ಬುಡಕಟ್ಟುಗಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಜಾರಿಗೆ ತಂದರೂ ಕೂಡ ಅವು ಆ ಸಮುದಾಯಗಳಿಗೆ ತಲುಪುವಲ್ಲಿ ವಿಫಲತೆಯನ್ನು ಹೊಂದಿವೆ. ಹಾಗಾಗಿ ಸರಕಾರ ಆಯಾ ಜಿಲ್ಲೆಯಲ್ಲಿನ ಸ್ವಯಂ ಸೇವಾ ಸಂಸ್ಥೆಗಳಿಗೆ ಈ ಯೋಜನೆಗಳನ್ನು ಕೊಡಲು ಪ್ರಾರಂಭಿಸಿತು. ಆದರಿಂದಾಗಿ ಇಂದು ಕೆಲವಾದರೂ ಬುಡಕಟ್ಟುಗಳು ಅಭಿವೃದ್ಧಿಯನ್ನು ಹೊಂದುತ್ತಿರುವುದು ಕಂಡುಬರುತ್ತಿದೆ. ಹಾಗಾಗಿ ಈ ಬುಡಕಟ್ಟುಗಳ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಪ್ರಮುಖವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿಯೂ ಕೂಡ ಹಲವಾರು ಸಂಘಸಂಸ್ಥೆಗಳು ಬುಡಕಟ್ಟುಗಳ ಅಭಿವೃದ್ಧಿಯಲ್ಲಿ ಕಾರ್ಯಪ್ರವೃತ್ತವಾಗಿವೆ.

ಆದಿವಾಸಿಗಳೆಂದು ಕರೆಯಲ್ಪಡುತ್ತಿರುವ ಅರಣ್ಯ ವಾಸಿಗಳು ಅಥವಾ ಬುಡಕಟ್ಟು ಸಮುದಾಯಗಳು ಕೇವಲ ಭಾರತದಲ್ಲಷ್ಟೇ ಅಲ್ಲದೆ ಇಡೀ ಪ್ರಪಂಚದ್ಯಾಂತ ವ್ಯಾಪಿಸಿದ್ದಾರೆ. ತಮ್ಮ ವಾಸಕ್ಕಾಗಿ ಇವರು ಇಂದಿಗೂ ಕಾಡು, ಮೇಡು, ಗುಡ್ಡ, ಗಿರಿಶೃಂಗಗಳಲ್ಲಿ ದುರ್ಗಮ ಪ್ರದೇಶಗಳಲ್ಲಿ ನಾಗರಿಕ ಜೀವನದಿಂದ ಹೊರತಾದ ರೀತಿಯಲ್ಲಿ ಬದುಕುತ್ತಿದ್ದಾರೆ. ಹಾಗೆಯೇ ಕೆಲವು ಬುಡಕಟ್ಟು ಸಮುದಾಯಗಳು ಅಲೆಮಾರಿಗಳು ಎಂಬ ಹೆಸರಿನಲ್ಲಿ ಊರೂರು ಸುತ್ತುತ್ತಲೆ ಜನವಾಸಿ ಇಲ್ಲದ ಕಥೆಯಲ್ಲಿ ಸಣ್ಣ ಪುಟ್ಟ ಟೆಂಟ್‌ಗಳನ್ನು ಹಾಕಿಕೊಂಡೋ ಅಥವಾ ಹಳೆಯ ದೇವಸ್ಥಾನಗಳಲ್ಲಿದದುಕೊಂಡು ನಮ್ಮ ಅಸ್ಥಿತ್ವವನ್ನು ಉಳಿಸಿಕೊಂಡೆ ಬರುತ್ತಿದ್ದಾರೆ. ನಾವೆಲ್ಲ ಪರಿಭಾವಿಸಿರುವಂತೆ ಹಿಂದೆ ಅಂದರೆ ಪುರಾತನ ಕಾಲದಲ್ಲಿ ಭಾರತದ ಮೇಲೆ ಧಾಳಿಮಾಡಿದ ಆರ್ಯನ್ನರು ಇಲ್ಲಿನ ಸ್ಥಳೀಯರನ್ನು ಸೋಲಿಸಿದ್ದರಿಂದ ಅವರೆಲ್ಲರು ತಮ್ಮ ಊರನ್ನೆ ಬಿಟ್ಟು ಕಾಡು ಸೇರಬೇಕಾಯಿತು ಎಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ಹೀಗೆ ಕಾಡನ್ನೆ ಆಶ್ರಯಸಿದ ಬುಡಕಟ್ಟು ಸಮುದಾಯ ನಾಗರಿಕರು ಸ್ಥಳೀಯವಾಗಿಯೇ ದೊರೆಯುತ್ತಿದ್ದ ಹಣ್ಣು ಹಂಪಲು, ಗಡ್ಡೆ ಗೆಣಸುಗಳನ್ನು ತಿನ್ನುತ್ತಲೇ ಉಳುಮೆ. ಪ್ರಾಣಿಗಳ ಸಾಕಾಣಿಕೆಯಂತಹ ಕ್ರಯೆಯಡೆಗೆ ಮುಖಮಾಡಿದರು ಊರೂರು ತಿರುಗುತ್ತಿರುವ ಅಲೆಮಾರಿಸಮುದಾಯಗಳು ಮಾತ್ರ ಅಲ್ಲಲ್ಲಿ ಅಲ್ಪ ಸ್ವಲ್ಪ ದುಡಿಮೆ ಮಾಢಿ ಸಂಪಾದಿಸುವವರಾಗಿದ್ದ ಇನ್ನುಳಿದವರು ಕಳ್ಳತನ ಮಾಡಿ ಬದುಕು ಸಾಗಿಸತೊಡಗಿದರು ವರ್ತಮಾನದಲ್ಲಿ ಅನೇಕ ಸಂಕಷ್ಟ ನೋವುಗಳಿಗೆ, ಕಾರ್ಯಗಳಿಗೆ ತಿರಸ್ಕಾರ, ತಾತ್ಸರ್ಯಗಳಿಗೆ ಬಲಿಯಾಗುತ್ತಲೆ ಮುಂದಿನ ಭವಿಷ್ಯತ್ತಿನ ಬಗ್ಗೆ ಯಾವ ದಿಕ್ಸೂಚಿಯನ್ನು ಹೊಂದದೆ ಅಂದಿನ ದಿನದ ಹೊಟ್ಟೆ ತುಂಬಿಸಿಕೊಳ್ಳುವಲ್ಲಿ ಕಳೆಯುತ್ತಿದ್ದಾರೆ.

ಅಲ್ಲದೇ ತಾವು ಹಿಂದಿನಿಂದಲೂ ಉಳಿಸಿ ಬೆಳೆಸಿಕೊಂಡು ಬಂದಿರುವಂತಹ ಆಚಾರ. ಸಂಪ್ರದಾಯ

ಧಾರ್ಮಿಕ ಆಚರಣೆಗಳು, ಹಬ್ಬ ಹರಿದಿನಗಳನ್ನು ಯಾವುದೇ ಬದಲಾವಣೆಗೆ ಬಲಿಯಾಗದೆ ಇಂದಿಗೂ ಮುಂದುವರೆಸುತ್ತಲೇ ತಮ್ಮ ಅನನ್ಯತೆಯನ್ನು ಮೆರೆಯುತ್ತಿದ್ದಾರೆ. ಜಾಗತಿಕರಣ ಎಂಬ ಸಂಕೀರ್ಣ ಸ್ಥಿತ್ಯಾಂತರಗಳಲ್ಲಿಯು ಇವರು ಯಾವುದೇ ಆಧುನಿಕತೆಗೆ ಒಳಗಾಗದಿರುವುದೆ ಇವರ ಹಿರಿಮೆಗೆ ಸಾಕ್ಷಿ. ಬುಡಕಟ್ಟು ಸಮುದಾಯಗಳನ್ನು ಮಾನವಶಾಸ್ತ್ರಜ್ಞರು. ಸಮಾಜ ಶಾಸ್ತ್ರಜ್ಞರು ಅನಾಗರಿಕರು ಅಸಂಸ್ಕೃತರು ಹಾಗೂ ಸಮಾಜದ ಮುಖ್ಯವಾಹಿನಿಯಲ್ಲಿರುವಂತಹ ಜನರಿಗಿಂತ ಭಿನ್ನರು. ಇವರು ನಿಗೂಡ ಪ್ರದೇಶದಲ್ಲಿ ವಾಸಿಸುವ ಗುಂಪೆಂದು ಅಭಿಪ್ರಾಯ ಪಟ್ಟಿದ್ದಾರೆ. ಬುಡಕಟ್ಟುಗಳು ಬಹುಮಟ್ಟಿಗೆ ಆದಿವಾಸಿ ಜನಾಂಗ ಆದರೆ ಸಂವಿಧಾನದ ಆಸಯದಿಂದ ತಯಾರಿಸಲಾದ ಪಟ್ಟಿ ಮತ್ತು ಮಾನವ ಶಾಸ್ತ್ರಜ್ಞರು ತಮ್ಮ ಮಾನದಂಡಗಳನ್ನು ಅವಲಂಬಿಸಿ ಬುಡಕಟ್ಟುಗಳೆಂದು ವರ್ಗೀಕರಿಸುವ ಪಟ್ಟಿಯಲ್ಲಿ ಏಕತೆಯಾಗಲೀ ಅಥವಾ ಹೋಲಿಕೆಯಾಗಲಿ ಇರುವುದಿಲ್ಲ. (ಶ್ರೀನಿವಾಸ ಎಂ.ಸಿ. 2004) ಸಾಮಾಜಿಕ ಜೀವನದಿಂದಲೇ ದೂರವಾಗಿರುವ ಬುಡಕಟ್ಟುಗಳಿಗೆ ನಾಗರಿಕ ಜೀವನದ ಇಲ್ಲದೆ ಇರುವಾಗ ಕೆಲವು ಕಡೆಗಳಲ್ಲಿ ಸಣ್ಣ ಪುಟ್ಟ ಅಪರಾಧಗಳು ನಡೆದಿರಬಹುದಾದರೂ ಅವನ್ನು ಇತರ ಅಮಾಯಕ ಬುಡಕಟ್ಟುಗಳಿಗೆ ಹೋಲಿಸಿ ಮಾತನಾಡುವುದು ಸೂಕ್ತ ಎನಿಸುವುದಿಲ್ಲ. ಏಕೆಂದರೆ ಪ್ರತಿಯೊಂದು ಬುಡಕಟ್ಟು ಸಮುದಾಯವೂ ಸಹ ತನ್ನದೇ ಆದಂತ ವಿಶಿಷ್ಠ ಶೈಲಿಯ ಅನನ್ಯತೆ. ಸೃಜನಶೀಲ ಚಟುವಟಿಕೆ, ಭಿನ್ನತೆ ಹೊಂದಿರುತ್ತವೆ. ಆದ್ದರಿಂದಲೇ ಭಾರತದ ತುಂಬೆಲ್ಲಾ ಕಂಡು ಬರುತ್ತಿರುವ ಎಲ್ಲಾ ಬುಡಕಟ್ಟು ಸಮುದಾಯಗಳು ಒಂದೇ ಬಗೆಯ ಅಥವಾ ಸ್ವಜಾತಿಯ ಬುಡಕಟ್ಟುಗಳ ಸಮೂಹಕ್ಕೆ ಸೇರದೇ ವಿವಿಧತೆಯಲ್ಲಿ ಏಕತೆ ಎಂಬಂತೆ ಭಿನ್ನ ಆಯಾಮಗಳಲ್ಲಿ ಕಂಡು ಬರುತ್ತಿವೆ. ಇಷ್ಟೆಲ್ಲಾ ಚರ್ಚೆಯ ನಂತರ ಆದಿವಾಸಿ ಎಂಬ ಪರಿಭಾಷೆಯನ್ನು ಅರಿಯುವುದು ಒಳಿತು. ಸಾಮಾನ್ಯವಾಗಿ ಯಾವುದೇ ಒಂದು ದೇಶದ ಮೂಲ ನಿವಾಸಿಗಳಿಗೆ ಆದಿವಾಸಿಗಳಿಗೆ ಆದಿವಾಸಿಗಳು ಎಂದು ಕರೆಯಬಹುದಾಗಿದೆ ಮನುಕುಲದ ಆರಂಭಿಕ ಹಂತವೇ ಆದಿವಾಸಿಗಳದಾಗಿದೆ. ನಂತರದಲ್ಲಿ ಹಲವಾರು ಬಗೆಯಲ್ಲಿ ಇದು ರೂಪಾಂತರ ಹೊಂದಿ ಆದಿವಾಸಿ, ಮೂಲನಿವಾಸಿ, ಗುಡ್ಡಗಾಡು ನಿವಾಸಿ, ಬನವಾಸಿ, ಗಿರಿಜನ, ಬುಡಕಟ್ಟುಗಳು ಎಂಬ ನಿರ್ವಚನಗಳು ರೂಪು ತಾಳಿದವು.

ಬುಡಕಟ್ಟು (ಟ್ರೈಬ್ ) ಸಮುದಾಯ (ಕಮ್ಯುನಿಟಿ) ಮತ್ತು (ಕ್ಯಾಸ್ಟ್) ಗಳನ್ನು ತಪ್ಪಾಗಿ ಜನಾಂಗ (ರೇಸ್) ಗಳೆಂದು ಸಂಬೋದಿಸುವುದುಂಟು. ವೈಜ್ಞಾನಿಕ ದೃಷ್ಟಿಯಲ್ಲಿ ಬುಡಕಟ್ಟು ಎಂಬ ಪದಕ್ಕೆ ಅನೇಕ ವಂಶಾನುಗತ ಲಕ್ಷಣಗಳನ್ನು ಸಮಾನವಾಗಿ ಪಡೆದಿರುವ ಜನರ ಗುಂಪು ಎಂದು ಉತ್ಪತ್ತಿ ಶಾಸ್ತ್ರಜ್ಞರು ಅರ್ಥ ನಿರೂಪಸಿದ್ದಾರೆ ಆದರೆ ಬುಡಕಟ್ಟು ಎಂಬ ಪದವು ಜೀವನಶಾಸ್ತ್ರಕ್ಕೆ ಮಾತ್ರವೇ ಸೀಮಿತವಾಗಿದೆ ಎಂಬುದು ಮಾನವ ಶಾಸ್ತ್ರಜ್ಞರ ಹೆಚ್ಚು ಕಡಿಮೆ ಇದೇ ಅರ್ಥದಲ್ಲಿ ಬುಡಕಟ್ಟು ಎಂಬ ಪದವನ್ನು ಉಪಯೋಗಿಸುತ್ತಾರೆ. "(ಡಾ.ಕೆ.ಎಂ. ಮೈತ್ರಿ 2002)" ಆಧುನಿಕ ನಾಗರಿಕ ಪ್ರಪಂಚದಲ್ಲಿ ಇಂದು ಹಲವಾರು ಸಮಾಜಶಾಸ್ತ್ರಜ್ಞರು. ಮಾನವ ಶಾಸ್ತಜ್ಞರು ಬುಡಕಟ್ಟು ಎಂಬ ಹೆಸರಿನಡಿಯಲ್ಲಿ ಪ್ರಪಂಚದ್ಯಾಂತ ತುಂಬಿರುವ ಅಲೆಮಾರಿ ಬುಡಕಟ್ಟು ಸಮುದಾಯಗಳನ್ನು ಕುರಿತು ಆದಿವಾಸಿಗಳಿಗೆ

ಪರ್ಯಾಯವಾಗಿ ಬುಡಕಟ್ಟು ಸಮುದಾಯಗಳೆಂದು ಗುರುತಿಸಿದ್ದಾರೆ. ಅಂದರೆ 'ಆದಿ' ಎಂದರೆ ಅತ್ಯಂತ ಹಳೆಯ, ಪುರಾತನ, ಪ್ರಾಚೀನ ಆದಿಮ ಎಂಬ ಅರ್ಥವಿದ್ದರೆ 'ವಾಸಿ' ಎಂಬುದಕ್ಕೆ ವಾಸಿಸುವರು ನಿವಾಸಿಗಳು ಎಂದು ಅರಿಯಬಹುದಾಗಿದೆ. ಆದಿವಾಸಿಗಳಿಗೆ ಸಂಬಂಧಿಸಿದಂತೆ ಈ ನಿರ್ವಚವು ಅತ್ಯಂತ ಸಮಂಜಸವಾಗಿದೆ. ಭಾರತ ಸಂವಿಧಾನದ 342 ವಿಧಿಯನ್ವಯ ಬುಡಕಟ್ಟು ಸಮುದಾಯಗಳನ್ನು ಪರಿಶಿಷ್ಠ ವರ್ಗಗಳ ಗುಂಪಿಗೆ ಸೇರಿಸಲಾಗಿದೆ.1937 ಜೂನ್ ತಿಂಗಳಲ್ಲಿ ಜೀನೆವಾದಲ್ಲಿ ನಡೆದ ಅಂತರಾಷ್ಟ್ರೀಯ ಕಾರ್ಮಿಕರ ಸಮಾವೇಶದಲ್ಲಿನ 107 ರಲ್ಲಿ ಈ ಬುಡಕಟ್ಟು ಜನರನ್ನು ದೇಶಿಯರು, ಸ್ವದೇಶಿಯರು ಎಂದು ವರ್ಣಿಸಿರುವುದನ್ನು ಬೆವುರಾ ಎಂ.ಕೆ. ಯವರು ದಾಖಲಿಸಿದ್ದಾರೆ. ಬುಡಕಟ್ಟು ಎಂಬ ಪರಿಭಾಷೆಗೆ ಅರ್ಥವಿವರಣೆ ಇಂದಿಗೂ ಕಷ್ಟ ಸಾಧ್ಯವಾಗಿಯೆ ಉಳಿದಿದೆ ಬುಡಕಟ್ಟು ಎಂಬ ಪದಕ್ಕೆ ಆಂಗ್ಲ ಭಾಷೆಯ ಬಿಡಿಭಜ ಎಂಬ ಪದದ ಅವಿರ್ಭಾವ ನಾಗರಿಕತೆಯ ಸುಳಿಯಲ್ಲಿ ಸಿಲುಕದೆ ಹಿಂದಿದ್ದ ಆದಿಯ ಸಂಸ್ಕೃತಿಯ ಸ್ಥಿತಿಯಲ್ಲಿಯೇ ಸಮಾಜದ ಮುಖ್ಯವಾಹಿನಿಯಿಂದ ದೂರ ಉಳಿದಿರುವ ಕಾಡುಮೇಡುಗಳನ್ನು ಆಶ್ರಯಿಸಿರುವ ತಮ್ಮದೇ ಆದಂತಹ ವಿಶಿಷ್ಠ ಸಂಸ್ಕೃತಿಯನ್ನೆಂದಿರುವ ಸಮುದಾಯವೆ ಬುಡಕಟ್ಟು ಸಮುದಾಯವೆಂದು ನಾವು ಪರಿಭಾವಿಸಬಹುದು.ಬಳ್ಳಾರಿ ಜಿಲ್ಲೆಯ ತಾಲ್ಲೂಕುವಾರು ಲಿಂಗವಾರು ಬುಡಕಟ್ಟು ಸಮುದಾಯದ ವಿವರ ಹೀಗಿದೆ.

<u>**(ಕೃಪೆ ಜನಗಣತಿ ವರದಿ 2001)**</u>

ಕರ್ನಾಟಕ ರಾಜ್ಯಾದ್ಯಂತ ಹರಡಿರುವ ಸುಮಾರು 50 ಬುಡಕಟ್ಟುಗಳು ಪರಿಶಿಷ್ಠ ವರ್ಗ ಬರುತ್ತವೆ ಇವುಗಳಲ್ಲಿ ಕೊರಗ ಮತ್ತು ಜೇನು ಕುರುಬ ಪಂಗಡಗಳು ಇತರೆ ಪಂಗಡಗಳು ಇತರೆ ಪಂಗಡಗಳಿಗಿಂತ ಸಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ತೀರ ಹಿಂದುಳಿದವರೆಂದು ಮನಗಂಡು ಈ ಪಂಗಡವನ್ನು ಸರಕಾರವು ಆದಿವಾಸಿ ಪಂಗಡ ಪ್ರಿಮಿಟಿವ್ ಟ್ರೈಬ್ಸ್ ಎಂದು ಗುರುತಿಸಿದೆ. ಅಲ್ಲದೆ ಹಕ್ಕಿಪಿಕ್ಕಿ ಇರುಳಿಗ, ಸೋಲಿಗ ಮತ್ತು ಎರವ ಈ ನಾಲ್ಕು ಪಂಗಡಗಳನ್ನು ಆದಿವಾಸಿ ಪಂಗಡಗಳೆಂದು ಗುರುತಿಸಲು ಸರಕಾರಕ್ಕೆ ಪ್ರಸ್ತಾವನೆಯನ್ನು ಸಹ ಸಲ್ಲಿಸಲಾಗಿದೆ. "ಶ್ರೀನಿವಾಸ ಎಂ.ಸಿ. 2004) ಅಲ್ಲದೆ ಇವುಗಳ ಜೊತೆ ಜೊತೆಗೆ ಹಲಸರು, ಸಿದ್ಧಿ, ಗೌಳಿಗ, ಗೊಂಡ, ಕುಡುಬಿ. ಮನ್ನರು ಕಾಡು ಕುರುಬರು, ಕಾಡುಗೊಲ್ಲರು ಮ್ಯಾಸ ಬೇಡರಂತಹ ಸಮುದಾಯಗಳನ್ನು ಇತರೆ ಎಲ್ಲಾ ಪರಿಶಿಷ್ಟ ವರ್ಗಗಳಿಗಿಂತ ಹಿಂದುಳಿದಿರುವುದರಿಂದ ಇವುಗಳನ್ನು ಸಹ ಆದಿವಾಸಿಗಳೆಂಬ ಗುಂಪಿನಡಿಯಲ್ಲಿ ಗುರುತಿಸಬಹುದಾಗಿದೆ.

ಕರ್ನಾಟದಲ್ಲಿಯೇ ಅತ್ಯಂತ ಹಿಂದುಳಿದ ಪ್ರದೇಶ ಎಂಬ ಹಣೆಪಟ್ಟಿ ಕಟ್ಟಿಕೊಂಡಿರುವ ಹೈದರಾಬಾದ್ ಕರ್ನಾಟಕದಡಿಯಲ್ಲಿ ಬರುವ ಬಳ್ಳಾರಿಯಲ್ಲಿ ಬರುವ ಆದಿವಾಸಿಗಳನ್ನು ಪರಿಚಯ ಮಾಡಿಕೊಡುವುದು ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ. 2001 ರ ಜನಗಣತಿಯಂತೆ ಬಳ್ಳಾರಿ ಜಿಲ್ಲೆಯಲ್ಲಿ ಬರುವ ಆದಿವಾಸಿಗಳ ವಿವರ ಹೀಗಿದೆ.

1. ಇರುಳಿಗ
2. ಆಡಿಯನ್

3. ಇರುಳಿರ್

4. ಹಲಸರು

5. ಹಕ್ಕಿಪಿಕ್ಕಿ

6. ಗೌಡಲ

7. ಗೊಂಡ, ನಾಯ್ಕ, ಪೋತ,ರಾಜಗೊಂಡ

8. ಡುಬ್ಲ ತೆಲವಿಯ ಹಲ್ಪತಿ

9. ಚಂಚು, ಚಂಚುವಾರ್

10. ಬಾರ್ಡ್ಡಾ

11. ಭೀಲ್, ಭಿಲ್‌ಗರಾಸಿಯಾ, ಢೋಳಿಬಿಲ್, ತುಂಗ್ರಿಗಣಸಿಯಾ, ಮೇವಾಸಿಭಿಲ್, ರಾವಲ್‌ಭಿಲ್, ತಾಟ್ವಿಭಿಲ್ ಭಾಗಾಲಿಯಾ ಭಿಲಾಲ್, ಪಾಲಾಲ್. ಪಾವಣ, ವಾಸವ, ವಾಸವೆ.

12. ಯೆರವ

13. ವಿಟೋರಿಯಾ, ಕೋಪ್ಪಾಲಿಯಾ, ಬರೋಡಿಯಾ.

14. ಪಾರ್ಧಿ, ಅಡವಿಚೆಂಚರು, ಫಾನ್ಸೆ, ಪಾರ್ಧಿ, ಹರಣ್ಯಶಿಕಾರಿ.

15. ಪಳಿಯಾನ್

16. ಜೇನು ಕುರುಬ ಕಾಡು ಕುರುಬ.

17. ಕೊಂಡ ರಾವುಸ

18. ಕಥೋಡಿ, ಕಟಕಾಲಿ, ಕಥೋಡಿ ಕೋರರ ಕಟಕಾರಿ, ಸೋನ್ ಕಥೋಡಿ, ಸೋನ್ ಕಟಕಾಲಿ.

19. ಕೋಳಿ ಥೋರ್, ಟೋಕ್ರೆ ಕೋಳಿ, ಕೊಲ್ಪ, ಕೊಲ್ಲಿ

20. ಕೊಂಡ ರಾವುಸ

21. ಕೊರಗ

22. ಕೊಯ ಭಿನಕೊಯ, ರಾಜಕೋಯ

23. ಕುರುಮನ್ಸ್

24. ಮಹಾಮಲ್ಸರ್

25. ಮಲ್ಯಕುಡಿ

26. ಮಿಲಸರ್

27. ಮುಯೆಕಂಡಿ

28. ಮಲೆರು

29. ಮೇದ,ಮ್ಯಾದರಿ, ಬುಕತ್, ಗೌರಿಗ

30. ನಾಯಕ, ನಾಯಕ್ಡ ಜೋಳಿವಾಲಿ, ನಾಯಕ, ಕಪಾಲಿ ನಾಯಕ, ಮೋಟ ನಾಯಕ,

ನಾನಾದಾಯಕ ನಾಯಕ್, ಬೇತ, ಬೇಡರ್, ವಾಲ್ಮೀಕಿ.1991 ಜನಗಣತಿಯ ವರದಿಯಂತೆ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬರುತ್ತಿರುವ ಬುಡಕಟ್ಟು ಸಮುದಾಯಗಳು ಇವಾಗಿವೆ ಒಟ್ಟು ಜನಸಂಖ್ಯೆಯಲ್ಲಿ ಈ ಬುಡಕಟ್ಟುಗಳ ಸರಾಸರಿ ಶೇ. 97 ರಷ್ಟು ನಾಯಕ ಬೇಡ, ವಾಲ್ಮೀಕಿ ಪಂಗಡಳಿದ್ದರೆ ಉಳಿದ ಶೇಕಡ 3% ಪಾಲು ಉಳಿದ ಬುಡಕಟ್ಟುಗಳದ್ದಾಗಿದೆ. ಹೀಗೆ ಬಳ್ಳಾರಿ ಜಿಲ್ಲೆಂ
ಯಲ್ಲಿ ಬರುವ ಕೆಲವು ಬುಡಕಟ್ಟುಗಳ ಪರಿಚಯ ಇಲ್ಲಿದೆ.

**1) ನಾಯಕ ಬುಡಕಟ್ಟು**

ಗಿರಿಜನರು ಭಾರತದ ಮೂಲನಿವಾಸಿಗಳು ನಾವೆಲ್ಲ ಪರಿಭಾವಿಸಿರುವಂತೆ ಹಿಂದಿನ ವೇದಗಳ ಕಾಲದಲ್ಲಿ ಗೊಂಡರು, ಬಿಲ್ಲರು ಅಸಾಧ್ಯತವಾದ ರಿಯಾಂಗ್ ಮಿಜೋ, ಲುಸಿಯಾ, ಸಂತಾಲರು, ಹಾಗೆಯೇ ದಕ್ಷಿಣ ಭಾರತದಲ್ಲಿನ ರಾತರು, ಕುಡಿಯರು, ಬೇಡರು, ಚಂಚರು, ತೋಡ, ಬಡಿಗೆ, ಮುರಿಯಾಗಳೆಲ್ಲರು ಮೂಲನಿವಾಸಿಗಳು ಪಟ್ಟಿಯಲ್ಲಿ ಬರುತ್ತಾರೆ. ಆರ್ಯರ ಆಗಮನದಿಂದ ಇವರೆಲ್ಲರೂ ತುಳಿತಕ್ಕೆ ಒಳಪಟ್ಟರು ಈ ಕಾರಣದಿಂದ ಮೂಲನಿವಾಸಿಗಳಾದ ಇವರು ಗಿರಿಕಂದರಗಳಲ್ಲು ಗುಡ್ಡಗವಿಗಳಲ್ಲಿ ಅಲೆಯಬೇಕಾಯಿತು. ನಾಗರಿಕತೆಯ ಸೊಂಕೆ ಸೊಂಕದಂತೆ ಜನರಿಂದಲೆ ದೂರವಾದರು ಇಂತಹ ಅನಾಗರೀಕತೆಯಲ್ಲಿ ತಮ್ಮ ಅನನ್ಯತೆ ಅಸ್ತಿತ್ವಗಳನ್ನು ಬಿಟ್ಟುಕೊಡದ ಹಲವಾರು ಬುಡಕಟ್ಟು ಸಮುದಾಯಗಳಲ್ಲಿ ನಾಯಕ ಅಥವಾ ಬೇಡ ಸಮುದಾಯವೂ ಒಂದು, ಇವರಿಗೆ ನಿಷಾದರು, ಪುಳಿಂದ, ವಾದ, ರರಾತ, ಶಬರ ನಾಯಕ, ಬೇಡ, ವಾಲ್ಮೀಕಿ, ತಳವಾರ ಎಂಬೆಲ್ಲಾ ಹೆಸರುಗಳ ಮೂಲಕವೂ ಗುರುತಿಸಲಾಗುತ್ತದೆ. ನಾಯಕ ಎಂದರೆ ಸಮಾಜಕ್ಕೆ, ರಾಜ್ಯಕ್ಕೆ ಮುಖಂಡ ಎಂದು ಹೆಸರು ರಾಮಾಯಣದ ಕರ್ತೃವಾಗಿರುವ ಶ್ರೀ ವಾಲ್ಮೀಕಿಯನ್ನೇ ಇವರು ತಮ್ಮ ನಾಯಕನೆಂದೆ ಗುರುತಿಸಿರುತ್ತಾರೆ. ನಾಯಕ ಜನಾಂಗದ ಮುಖ್ಯ ಕಸುಬು ಎಂದರೆ ಬೇಟೆಯಾಡುವುದು. ಮಳೆಯಗಾರಿಕೆ, ಕಾಮಗಾರಿಕೆಯಂತಹ ಹತ್ತು ಹಲವು ಮಹತ್ವದ ಕಾರ್ಯಗಳನ್ನು ನಿರ್ವಹಿಸುವಂತಹರಾಗಿದ್ದರು ಆದಮ ಕಾಲಾಧೀಕೃತದಲ್ಲಿ ಇವರು ಅರಣ್ಯಗಳಲ್ಲಿ ಆಹಾರ ಸಂಗ್ರಹಣೆ ಬೇಟೆಗಾರಿಕೆ, ಪಶುಪಾಲನೆಯಂತಹ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿದ್ದರು, ನಾಯಕ ಜನಾಂಗದ ಮೂಲವು ಆಂಧ್ರ, ಒರಿಸ್ಸಾಗಳೆಂದು ತಿಳಿಯಲಾಗಿದೆ.

ಭಾರತಕ್ಕೆ ವ್ಯಾಪಾರಕ್ಕಾಗಿ ಬಂದಂತಹ ಇಂಗ್ಲೀಷರು ಇಲ್ಲಿನ ಸಂಪತ್ತಿನ ಒಡೆಯರಾಗುವ ಆಶೆಯಿಂದ ಹಲವಾರು ಬಗೆಯಲ್ಲಿ ಇಲ್ಲಿನ ಸ್ಥಳೀಯ ಜನರನ್ನು ಶೋಷಣೆಗೆ ಗುರಿಪಡಿಸಿದರು. ಅಂತಹವರಲ್ಲಿ ಹರಿಜನರು ಅತ್ಯಂತ ಹೆಚ್ಚಾಗಿ ಬಲಿಯಾದವರಾಗಿದ್ದರು ಆದರೂ ಸಹ ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲಾವಧಿಯಲ್ಲಿ ಆದಂತಹ ಮಹತ್ವ ಪೂರ್ಣ ಕಾರ್ಯಗಳಿಂದ ಸ್ಥಳೀಯ ಜನರ ಜೀವನೋಪಾಯಗಳಲ್ಲಿ ಅತ್ಯಂತ ಹೆಚ್ಚಿನ ಬದಲಾವಣೆಗಗಾಲಂತಾದವು.

ವರ್ತಮಾನದಲ್ಲಿ ಕರ್ನಾಟಕದಲ್ಲಿ ನಾಯಕ ಜನಾಂಗದ ಒಟ್ಟು ಜನಸಂಖ್ಯೆ : 30ಲಕ್ಷದಷ್ಟಿಟ್ಟಿದ್ದಾರೆ. ನಾಯಕರು ಆದಿಮ ಕಾಲಂತ್ಯದಲ್ಲಿ ಪ್ರಕೃತಿಯನ್ನೇ ಆರಾಧಿಸುವರಾಗಿದ್ದರು, ಉದಾ:

ಸೂರ್ಯ, ಚಂದ್ರ, ನಕ್ಷತ್ರಗಳು ಬಿಲ್ಲಿ, ಬನ್ನಿಮರ , ಎಕ್ಕೆಗಿಡಗಳನ್ನು ದೇವರು ಎಂದು ಪೂಜಿಸುತ್ತಿದ್ದರು. ಬೇಡರು ಆರಂಭದ ಮೂಲದಲ್ಲಿ ತಮ್ಮ ಆಯುಧಗಳನ್ನು ಬನ್ನಿ ಮರದಲ್ಲಿಟ್ಟು ರಕ್ಷಣೆ ಪಡೆಯುತ್ತಿದ್ದರು. ಆದ್ದರಿಂದಲೇ ಅವುಗಳಿಗೆ ದೇವರೆಂದು ನಂಬಿ ಆರಾಧಿಸುತ್ತಿದ್ದರು. ಬೇಡ ಸಮುದಾಯದ ಪಳೆಯುಳಿಕೆಗಳಾದ ಮಾರಮ್ಮ, ಊರಮ್ಮ, ದುರುಗಮ್ಮ, ಎಲ್ಲಮ್ಮ, ಮುಂತಾದ ಇಂತಹ ಆರಾಧಿಸುವುದು ಇಂದಿಗೂ ರೂಡಿಯಲ್ಲಿದೆ. ಇವರನ್ನು ಕಳ್ಳರೆಂದು ಕರೆಯುತ್ತಿದ್ದರಲ್ಲದೆ. ಇವರು ಊರ ಬರಬೇಕಾದರೆ ಇವರ ಮೇಲೆ ನಿಗಾ ಇಡಲು ಹಲವರು ಇರುತ್ತಿದ್ದರು. ಇಂತಹ ಸಂಕಷ್ಟ ಇವರದಾಗಿತ್ತು, ಹಲವಾರು ಕಡೆಯಲ್ಲಿ ಹರಿದು ಹಂಚಿ ಹೋಗಿಟ್ಟ ಕರ್ನಾಟಕವನ್ನು ಒಂದುಗೂಡಿಸಿ ಅಖಂಡ ಕರ್ನಾಟಕ ರೂಪತಾಳಿದ ನಂತರವೇ ಬೇಡರಿಗೆ ಮುಖ್ಯವಾಹಿನಿ ಕಡೆಗೆ ಬರುವಲ್ಲಿ ರಹದಾರಿಯಾಯಿತು. ಇದೇ ಸಮಯದಲ್ಲಿ ಶ್ರೀದೇವರಾಜು ಅರಸವರು ಹಿಂದುಳಿದ ವರ್ಗಗಳ ಒಳಿತಿಗಾಗಿ ರಚಿಸಿದ ಎಲ್_ಜಿ. ಹಾವನೂರ್ ಆಯೋಗವು ಸಮಾಜದ ಅಂಚಿನಲ್ಲಿದ್ದ ಹಲವಾರು ಸಮುದಾಯಗಳಿಗೆ ವರ ಪ್ರಸಾದವಾಯಿತು. ಈ ಸಮಿತಿಯ ಶಿಫಾರಸ್ಸಿನ ಅನ್ವಯ ಕೇಂದ್ರ ಸರ್ಕಾರವು 'ನಾಯಕ' ಸಮುದಾಯವನ್ನು 'ಪರಿಶಿಷ್ಟ ಪಂಗಡಗಳ' ಪಟ್ಟಿಗೆ ಸೇರಿಸಿತು.

ಕರ್ನಾಟಕದ ಆಧುನಿಕೋತ್ತರ ಸಮಾಜದಲ್ಲಿ ಬೇಡರನ್ನು ಮೂರು ವರ್ಗಗಳಲ್ಲಿ ಕಾಣಬಹುದು ಇದಕ್ಕೆ ಆರ್ಥಿಕ ಸಾಮಾಜಿಕವಾದಂತಹ ಮಾನದಂಡವಲ್ಲದೆ ಸಾಮಾನ್ಯ ನಿರ್ಮಾವನ್ನು ಬಳಸಿಕೊಂಡಿರುವ ಒಂದು ಮೂಲ ವೃತ್ತಿಗೆ ಬಲಿಯಾಗಿರುವವರು ಎರಡು ಅವೃತ್ತಿಗಳಿಗೆ ಹಾತೊರೆಯುವವರು, ಮೂರು, ಸರಕಾರಿ ನೌಕರಿಗೆ ಸಂಬಂಧಿಸಿದಂತೆ ಹೋರಾಡುವ ವರ್ಗ ಎಂಬ ವರ್ಗಗಳಿವೆ ಮೂಲವೃತ್ತಿ ಎಂದರೆ ಬೇಟೆ ಅನ್ಯವೃತ್ತಿಗಳೆಂದರೆ, ಪಶುಪಾಲನೆ ಪೀಠಿಕೆ, ಕ್ರಮ ವ್ಯಾಪಾರ ಇತ್ಯಾದಿ ವಿದ್ಯಾವಂತವರ್ಗ ಸರಕಾರಿ ಸೇವೆಗೆ ಸೇರಲು ಸಾಮಾನ್ಯ ವೃತ್ತಿಯಲ್ಲಷ್ಟೇ ಅಲ್ಲದೆ. ಸಾಮಾಜಿಕ ಸ್ಥಿತಿ-ಗತಿ ಆರ್ಥಿಕ, ರಾಜಕೀಯ, ಹಿನ್ನೆಲೆಗಳ ಮೂಲಕ ಅವಲೋಕಿಸಿದಾಗ ಜಾತಿ-ಕಂದಕ ವರ್ಗ, ಹೋರಾಡಗಳ ಸಂಕುಚಿತ ಭಾವನೆಗಳಿಂದ ಅಲ್ಲೋಲ ಕಲ್ಲೋಲವಾದ ವಾತವರಣ ಪ್ರವೇಶಿಸಿವೆ ಬೇಡರಲ್ಲಿ ಶ್ರೀಮಂತರು ಮೊದಲಾದವುಗಳಲ್ಲಿ ಬರುತ್ತಾರೆ. ಬಂಡವಾಳಶಾಹಿ ದೊರೆಗಳು, ರಾಜ ಸಂಸ್ಥಾನಿಕರು, ಊಳಿಗಮಾನ್ಯ ಅಧಿಕಾರಿ ವರ್ಗದವರನ್ನು, ಸಾಮಾನ್ಯವಾಗಿರುವ ಕಲ್ಪನೆಯಂತೆಗೆ ನಾಯಕ ಜನಾಂಗ ಆರಂಭದಲ್ಲಿ* ಧರ್ಮದ ಪ್ರಭಾವಕ್ಕೆ ಒಳಗಾಗಿ ತದನಂತರದಲ್ಲಿ ವೈಷ್ಣವ ಧರ್ಮದ ಕಡೆಗೆ ವಾದೀತು ಎಂದು ನಂಬಲಾಗಿದೆ ಅಂದರೆ ಶಿವನ ಆರಾಧನೆಯನ್ನೂ ಅನುಸರಿಸುವ ಜನರು ಶಿವಲಿಂಗವನ್ನು ಪೂಜಿಸುತ್ತಲೆ ಬಂದಿದ್ದಾರೆ. ಹಾಗೆಯೇ ಕೆಲವರು ವೈಷ್ಣ ಧರ್ಮದ ಆರಾಧನೆಯನ್ನೂ ಅನುಸರಿಸು ನರಸಿಂಹನ ವಿಗ್ರಹವನ್ನು ಪೂಜಿಸುತ್ತಿ ಬಂದಿದ್ದಾರೆ, ಒಟ್ಟಾರೆಯಾಗಿ ಬೇಡ ಸಮುದಾಯವು ಎರಡೂ ಧರ್ಮಗಳಿಗೂ ತನ್ನ ನಿಷ್ಠೆಯನ್ನು ತೋರಿಸುತ್ತಲೆ ಅದನ್ನು ತನ್ನಡೆಗೆ ಸೆಳೆದುಕೊಂಡಿದೆ ಎಂದರೆ ತಪ್ಪಾಗಲಾರದು. ಇಂದಿಗೂ ನಾವು ನಾಯಕ ಜನಾಂಗದವರಲ್ಲಿ ಈ ದ್ವಿವಿಧದ ಧಾರ್ಮಿಕ ಆಚರಣಾ ವಿಧಿಗಳನ್ನು ಕಾಣಬಹುದಾಗಿದೆ. ಬೇಡರಲ್ಲಿರುವ ಊರನಾಯಕರು ಒಂದು ಬಗೆಯ ಧಾರ್ಮಿಕ

ಆಚರಣೆಗಳಿಗೆ ಒಳಗಾಗಿದ್ದಕ್ಕೆ, ಮ್ಯಾಸನಾಯಕರು ಒಂದು ಕತೆಯಲ್ಲಿ ಧಾರ್ಮಿಕ ವಿಚಾರಣೆಗಳಿಗೆ ಒಳಗಾಗಿದ್ದಾರೆ.

ಬುಡಕಟ್ಟು ಜನಾಂಗಗಳು ತಮ್ಮ ದೇವರುಗಳಿಗೂ ಮಾನವ ರೂಪದ ಬಗೆಬಗೆಯ ಆಕಾರಗಳಲ್ಲಿ ರೂಪಿಸುವ, ಪೂಜಿಸುವ, ಪದ್ಧತಿಯನ್ನು ನಾವು ಕಾಣಬಹುದು. ಬೇರೆ ಬೇರೆ ಬುಡಕಟ್ಟು ಸಮುದಾಯಗಳಲ್ಲಿ ಪ್ರಕೃತಿಯಲ್ಲಿನ ಪಶು ಪಕ್ಷಿಗಳನ್ನು ತಮ್ಮ ಕುಲದೈವವೆಂದು ಪೂಜಿಸುವುದುನ್ನು ನೋಡುತ್ತೇವೆ. ಆದರೆ ಬೇಡ ಸಮುದಾಯದಲ್ಲಿ ದೇವತೆಗಳನ್ನು ವಸ್ತುರೂಪದಲ್ಲಿ ಆರಾಧಿಸುವುದಕ್ಕೂ ಪೂಜಿಸುವುದನ್ನು ವಿಶೇಷವಾಗಿ ಗಮನಿಸಬಹುದು.

ಹಿಂದಿನ ಹಳೇ ಮೈಸೂರು, ಹೊಸ ಮೈಸೂರು, ಹೈದರಾಬಾದ್, ಕರ್ನಾಟಕ ,ಮದ್ರಾಸ್‌ಕರ್ನಾಟಕ ಎಂದು ಕರ್ನಾಟಕವನ್ನು ಆಡಳಿತಾತ್ಮಕ ವಿಂಗಡಿಸಲಾಗಿತ್ತು. ಈ ಎಲ್ಲಾ ಭಾಗಗಳಲ್ಲಿದ್ದು ಬೇಡರ ಸ್ಥಿತಿಗತಿಗಳು ತುಂಬ ಶೋಚನಿಯವಾಗಿದ್ದವು ಎಂದು ಉಲ್ಲೇಖಗಳು ಇವೆ ದ್ರಾವಿಡರ ಕಾಲಾವದಿಯಲ್ಲಿ ಇವರನ್ನು ಈ ಸಾಲಿನಲ್ಲಿ ಹೆಸರಿಸಬಹುದು. ಮಧ್ಯಮ ವರ್ಗದಲ್ಲಿ ಸರಕಾರಿ ಅಧಿಕಾರಿಗಳು ಭೂಮಾಲೀಕರು ಇತರರು ಕಂಡುಬಂದರೆ, ಸಾಮಾನ್ಯ ವರ್ಗದಲ್ಲಿ ರೈತರು ಕೂಲಿಕಾರ್ಮಿಕರು, ಭೂರಹಿತರು, ಅಲೆಮಾರಿಗಳು ಪ್ರವಾಸಕರಾಗಿದ್ದಾರೆ, ಸಾಮಾನ್ಯ ವರ್ಗದವರಲ್ಲಿ ರೈತ ಕೂಲಿಕಾರ್ಮಿಕರಲ್ಲದೆ ಅಲಕ್ಷಕ್ಕೆ ತುಳಿತಕ್ಕೆ ಒಳಗಾದವರೆಂದು ಗುರುತಿಸಬಹುದು. ಬೇಡ ಜನಾಂಗದಲ್ಲಿ ಶ್ರೀಮಂತರಲ್ಲಿ ಶೋಷಣೆ, ದರ್ಪ, ದೌರ್ಜನ್ಯವನ್ನು ನಿರ್ಲಕ್ಷಿಸುವಂತಿಲ್ಲ. ಆಸ್ತಿಕರೆ ತುಂಬಿರುವ ಇವರಲ್ಲಿ ನಾನಾ ದೇವತೆಗಳ ಆರಾಧಿಸಲಾಗಿ ಮೂಢ ಕಂದಾಚಾರಿಗಳಿಗೆ ತಿಲಾಂಜಲಿ ತಿಳದಿರುವುದು. ಬೇಡಕರ ಬೇಟೆ, ಕ್ರೇಪಿ. ಪಶುಪಾಲನೆಯಿಂದ ಬೇಡರು ವ್ಯಾಪಾರ ಉದ್ಯೋಗಗಳಲ್ಲಿರುವುದ ತುಂಬ ಸಂತೋಷದಾಯಕ.

ಕರ್ನಾಟಕ ವಿವಿಧ ಭಾಗಗಳಲ್ಲಿ ನೆಲೆಸಿರುವ ಬೇಡ ಸಮುದಾಯದವರು ಏಕರೂಪವಾಗಿಲ್ಲ. ಭೌತಿಕವಾಗಿ ಮತ್ತು ಭೌದ್ಧಿಕವಾಗಿ ಭಿನ್ನತೆ ಎದ್ದು ಕಾಣುವ ಆಂಶವಾಗಿದೆ ಆರ್ಹ, ಉಡುಗೆ, ತೊಡುಗೆ, ಆಹಾರ, ವಿಚಾರ, ಸಂಪ್ರದಾಯ, ರೂಢಿ ಪದ್ಧತಿಗಳಿಂದಲೂರ ಸಾಮರಸ್ಯತೆ ಕಾಣಲಾಗುವುದಿಲ್ಲ ವಾಸಿಸುವ ಪರಿಸರ, ಸೇವಿಸುವ ಆಹಾರ, ಕಲಿಕೆ ಮತ್ತು ವಂಶಪಾರಂಪರೆಯಿಂದ ಬೇಡರ ಲಕ್ಷ್ಣಗಳು ತೀರಾ ಓಡಿಯಂಬಂತೆ ಗೋಚರಿಸುತ್ತಿವೆ.

<u>ಮೇದಾ ಮೇದ :</u>

ಸರಕಾರಿ ಕೋಟದಡಿ "ಪರಿಶಿಷ್ಠ ಪಂಗಡಗಳ ಪಟ್ಟಿಯಲ್ಲಿ ಇರುವ ಮೇದಾ ಸಮುದಾಯವು ಕರ್ನಾಟಕದ್ಯಾಂತ ತುಂಬಿ ಕೊಂಡಿದೆ, ಮೇದಾರ, ಮೇದಾರಿ, ಮಾದರ್ಕಳ್ ಮಾದ ಮೇದ್ಲರು ಅಥವಾ ಮೇದರ ಕಾನನ್ ಬರುಡ ಬಿಡ್ಡರು ಗೌರಿಗರು ಎಂದು ಕರೆಯಲ್ಪಡುತ್ತಿರುವ ಇವರು ಅತ್ಯಂತ ವಿಶಿಷ್ಟವಾದ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದಾರೆ. ಮೇದಾರರು ಸಾಮಾನ್ಯವಾದ ನಂಬಿಕೆಯಂತೆ ಕರ್ನಾಟಕದ ಗಡಿಗೆ ಹೊಂದಿಕೊಂಡಿರುವ ಆಂಧ್ರ ತಮಿಳು ನಾಡುಗಳೂ ಮೂಲಕ ಬಂದವರಾಗಿದ್ದಾರೆ ಆಗಾಗ

ಇವರು ಇವರು ತಮ್ಮ ಬುಡಕಟ್ಟಿನ ಹುಟ್ಟಿನ ಬಗ್ಗೆ ಹಲವು "ಪೌರಾಣಿಕ" ಹಿನ್ನಲೆಗಳನ್ನು ಹೇಳುತ್ತಾರೆ ಇದಕ್ಕೆ ಪೂರಕವಾಗಿ "ಮೇದ" ಮೇದರ್ಕಳ್, ಗೌರಿ, ಗೌರಮಕ್ಕಳು ಎಂತಾಗಿ ತಿಮ್ಮನ್ನು ಕರೆದುಕೊಳ್ಳಲು ಕಾರಣವಾಗಿದೆ ಈ ಗೌರಮಕ್ಕಳು ಎಂಬ ಹೆಸರು "ಗಂಗೆ ಮಕ್ಕಳು" ಎಂಬ ಹೆಸರಿಗೆ ಅನ್ವಯಿಸುವಂತಹದ್ದಲ್ಲ (ಪಾಂಡುರಂಗ ಡಿ. ಆರ್. 2000) ವಿಕಾಸ ಕರ್ನಾಟಕದಲ್ಲಿ ಮೇದರ 1991 ಜನಸಂಖ್ಯೆ ವರದಿಯ ಪ್ರಕಾರ ಮೇದಾರರ ಸಂಖ್ಯೆ 26,534, ಇದೆ ಎಂದು ಉಲ್ಲೇಖಿಸಲಾಗಿದೆ. ಇವರಲ್ಲಿ ಕನ್ನಡ ಭಾಷಿಕರನ್ನು ಮೇದ, ಮೇದಾರ, ಮಾದರ ಎಂದು ಕರೆದರೆ ಮೇದರ್ಕಳ್ ಮೇದರ ಕಾರನಾ ಎಂದು ತೆಲಗದಿನಲ್ಲಿ ಸಂಭೋದಿಸುವರು ತಮಿಳುನಾಡಿನಿಂದ ಬಂದವರು ತಮಿಳು ಮಾತಾಡುವರು

ಮೇದಾರ ಕೇತಯ್ಯ ಮೇದಾರ ಸಾಂಸ್ಕೃತಿಕ ನಾಯಕ ಮೇದರ ಬುಡಕಟ್ಟು ಸಮುದಾಯದಲ್ಲಿ ಹಲವು ಬಗೆಯ ಪವಾಡಗಳನ್ನು ಮೆರೆದು ಹಲವರ ಅಹಂಕಾರವನ್ನು ನೀಶಿ, ರೋಗ ರುಜಿನಿಗಳನ್ನು ನಿವಾರಿಸಿ ಸತ್ತವರನ್ನು ಬದುಕಿಸಿ ಖ್ಯಾತರಾದವರೆ ಮೇದಾರ ಕೇತ್ಯಯ ಹಾಗೂ ಅವನ ಮಗ ಮೇದಾಗ ಲಿಂಗಯ್ಯ ಹಾಗು ಹೆಂಡತಿ ಶಾಂತಮ್ಮ ಮೂರು ಜನರು ಮೇದರಿ ಭಕ್ತಿಯ ಪರಕಾಷ್ಟೆಯಲ್ಲಿ ಅತ್ಯುಗ್ರರಾಗಿದ್ದಾರೆ. ಪ್ರತಿದಿನ ಮೇದಾರ ಮನೆಯಲ್ಲಿ ಇವರ ಪರ ನಿರಂತರವಾಗಿ ನೆಡೆಯುತ್ತಲೆ ಬಂದಿದೆ, ಇದೇ ಜನಾಂಗದಲ್ಲಿ ಅನ್ನದಾನಿ ಎಂದು ಕರೆಯಲ್ಪಡುತ್ತಿದ್ದ ಮೇದಾರ ಚೆನ್ನಯ್ಯನು ಸಹ ಪ್ರಮುಖವಾಗಿದ್ದು ಇವನು ದಿನವೂ ಸಾವಿರಾರು ಜನರಿಗೆ ಅನ್ನ ಸಂತರ್ಪಣೆ ಮಾಡುತ್ತಿದ್ದಾನೆನ್ನಲಾಗಿದೆ. ಜಾತಿ ಪಂಚಾಯಿತಿಯನ್ನೂ ಕುರಿತಂತೆ ಇತರ ಎಲ್ಲಾ ಬುಡಕಟ್ಟುಗಳಲ್ಲಿ ಮೇದಾರರಲ್ಲಿಯೂ ಹಿರಿಯರನ್ನೇ ತಮ್ಮ ನಾಯಕರನ್ನಾಗಿ ಆರಿಸುವ ಪರಿಪಾಠವಿದೆ, ಜಾತಿಯ ಮುಖಂಡರು ಎಲ್ಲಲ್ಲೂ ಸೇರಿ ಜಾತಿಯ ಮುಖಂಡ ಅಥವಾ ನಾಯಕನನ್ನು ಆರಿಸುವರು ಸ್ಥಳೀಯ ಪಂಚಾಯಿತಿಯ ವ್ಯವಸ್ಥೇ ಹಾಗೂ ಪ್ರಧಾನಮಂತ್ರಿಯಂತಹ ಸ್ಥಾನಗಳಲ್ಲಿರುವಂತೆ ಇವರಲ್ಲಿಯೇ ನಾಯಕನಾದವನ್ನು ತನಗೆ ಅಪರಾದವರನ್ನು ಆಡಳಿತದಲ್ಲಿ ಸೇರಿಸಿಕೊಳ್ಳುವ ಅಧಿಕಾರವಿದೆ, ಇಂತಹ ಹಿರಿಯನಿಗೆ ಒತ್ತಿನ ಯಜಮಾನ ಎಂದು ಕರೆಯಲಾಗುತ್ತದೆ.

ವೈವಾಹಿಕ ವಿಧಿಯಗಳು ಸಹ ಮೇದಾರರ ಸಮುದಾಯದಲ್ಲಿ ತುಂಬ ಅರ್ಥಪೂರ್ಣವಾಗಿವೆ. ಮದುವೆಗೆ ಸಂಬಂಧಿಸಿದಂತಹ ಎಲ್ಲಾ ಕಾರ್ಯ ಚಟುವಟಿಕಗಳು ಯಜಮಾನನ ಅಧೀನದಲ್ಲಿರುತ್ತವೆ. ಮದುವೆಯ ದಿನಾಂಕ ನಿಶ್ಚಯವಾದೊಡನೆ ಹಿರಿಯ ಜಾತಿಯಸ್ತರಿಗೆಲ್ಲರಿಗೂ ಈ ಸುದ್ದಿಯನ್ನು ತಿಳಿಸುತ್ತಾನೆ. ಊರಿನ ಹಿರಿಯನಾದ ಗೌಡನಿಗೆ ವೀಳಯದೆ ಮರ್ಯಾದೆ ಮಾಡಿದ ನಂತರ ಇತರರಿಗೆ ಮಾಡುವ ಪರಿಪಾಠ ಮೇದಾರರಲ್ಲಿದೆ ಗಂಡು ಹೆಣ್ಣುಗಳ ಸಂಗಮಕ್ಕೆ ಇವನೇ ಸಾರಥಿಯಾಗಿ ಕಾರ್ಯನಿರ್ವಹಿಸುವನು. ನಂತರ ಇವನೇ ಮುದುವೆಯ ದಿಬ್ಬಣವನ್ನು ಹೊರಡಿಸುವನು ತಿಳಿಸಿದ ನಂತರ ಮುಂದಿನ ಕಾರ್ಯಗಳು ನಡೆಯುತ್ತವೆ. ಅವನ ಆಜ್ಞೆಯನ್ನು ತಿರಸ್ಕರಿಸಲು ಸಾಧ್ಯವೇ ಇಲ್ಲ. ಅಲ್ಲದೆ ಕೆಲವೆ ಬುಡಕಟ್ಟುಗಳಲ್ಲಿರುವಂತೆ ಮೇದಾರರಲ್ಲಿಯೂ "ಕೊಡಿಕೆ"ಎಂಬ ಸಂಪ್ರಾದಯವಿದೆ. ಅಂದರೆ

ಹೆಂಡತಿ ಅಥವಾ ಗಂಡ ಸತ್ತವರು ಮರುವಿವಾಹವಾಗುವ ಅವಕಾಶ ಅದಕ್ಕೆ ಗಂಡ– ಹೆಂಡಿರ ಒಪ್ಪಿಗೆ ಇದ್ದರೆ ಅದನ್ನು ಗೌಡನೇ ನೆರವೇರಿಸುವನು ಅನಂತರ ಅವರಿಗೆ ಹುಟ್ಟಿದ ಮಕ್ಕಳನ್ನು ಸ್ವಸಮುದಾಯದಲ್ಲಿ ಯಾರಾದರೂ ಮದುವೆಯಾಗಬಹುದು. ಆದರೆ ವಿಧವೆಯಾದವರಿಗೆ ಸಮುದಾಯದಲ್ಲಿ ನಡೆಯುವ ಶುಭಕಾರ್ಯಗಳಿಗೆ ಅವಕಾಶ ವಿರುವುದಿಲ್ಲ. ಬೇರೆ ಜಾತಿಯವಳನ್ನು ವಿವಾಹವಾದರೆ ಅವಳನ್ನು ಮನೆಗೆ ಸೇರಿಸುವುದಿಲ್ಲ. ಮೇದಾರ ಹುಡುಗಿ ಬೇರೆ ಜಾತಿಯವರನ್ನು ಮದುವೆಯಾದರೂ ಅವಳನ್ನು ಮತ್ತೆ ಕೇರಿಗೆ ಸೇರಿಸುವುದಿಲ್ಲ. ಅವಳಿಗೆ ಅಥವಾ ಜಾತಿಯ ಗಂಡಿಗೆ ಅನ್ಯಜಾತಿಯಿಂದ ಹುಟ್ಟಿದ ಮಕ್ಕಳನ್ನು ಸ್ವಜಾತಿಯವರು ವಿವಾಹವಾಗುವಂತಿಲ್ಲ. ಜಾತಿಯ ಗೌಡ ಅಥವಾ ಯಜಮಾನನ ಹೇಳಿದ ಮಾತನ್ನು ಯಾರು ತಿರಸ್ಕರಿಸುವಂತಿಲ್ಲ. ಹಾಗೆ ತಿರಸ್ಕರಿಸಿದ್ದೇ ಆದರೆ ಅಂತಹವರಿಗೆ ಬಹಿಷ್ಕಾರ ಹಾಕುತ್ತಾರೆ. ಇಂತಹ ಬಹಿಷ್ಕಾರಕ್ಕೆ ಜಾತಿಯವರೆಲ್ಲರೂ ಬೆಂಬಲ ಕೊಡುತ್ತಾರೆ ಹುಡುಗಿಯನ್ನು ವಿವಾಹವಾದರೂ ಸಮಾಜದಿಂದ ಬಹಿಷ್ಕಾರ ತಪ್ಪಿದ್ದಲ್ಲ.

ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದಂತೆ ಮೇದಾರರಲ್ಲಿ ವೈವಿಧ್ಯಮಯ ಯಾವ ಆಚರಣೆಗಳು ಇವೆ. ಸಾಮೂಹಿಕವಾಗಿ ದೇವರ ಕಾರ್ಯಗಳನ್ನು ಕೈಗೊಳ್ಳುವುದು. ವಾರ್ಷಿಕ ಹಬ್ಬಗಳು ವಿಶೇಷ ಹಬ್ಬಗಳು ಈ ಎಲ್ಲಾ ಸಂದರ್ಭಗಳಲ್ಲಿಯೂ ಮೇದಾರ ಯಜಮಾಮನನೆ ಪ್ರಮುಖವಾಗಿರುತ್ತಾನೆ. ಅಷ್ಟೇ ಅಲ್ಲದೆ ತಮ್ಮ ವ್ಯಾಪಾರ ವಹಿವಾಟುಗಳಿಗೆ ಸಂಬಂಧಿಸದಂತೆಯಾ ಸರಕಾರದ ಜೊತೆ ವ್ಯವಹರಿಸುವ ಅಧಿಕಾರ ಯಜಮಾನನಿಗಿದೆ.

ಮುಖ್ಯವಾಗಿ ಆರ್ಥಿಕ ಚಟುವಟಿಕೆಗೆ ಸಂಬಂಧಸಿದಂತೆ ಮೇದಾನ ಸಮುದಾಯವು ಪ್ರಾಕೃತಿಕವಾಗಿ ದೊರೆಯುವಂತಹ ಬಿದಿರನ್ನೇ ವಿವಿಧ ಬಗೆಯ ವಿಚಾರಗಳಾಗಿ ತಯಾರಿಸಿ ಮಾರಾಡುತ್ತಿದೆ. ಇದು ಮೇದಾರರ ಕುಲ ಕಸುಬು ಸಹ ಪ್ರಕೃತಿಯೇ ಇವರನ್ನು ಸಾಕಿ ಸಲುಹಿರುವುದರಿಂದ ಕುಲಕಸುಬಿನಿಂದ ಇವರು ಹಿಂದೆ ಸರಿಯುವುದಿಲ್ಲ ಎನ್ನುತ್ತಾಋಎ. ಆದರೆ ಯಾಂತ್ರಿಕವಾದ ಜೀವನದಲ್ಲಿ ಪಾರಂಪರಿಕ ಕುಲಕಸುಬುಗಳಿಗೆ ಬರಬಂದಿವೆ ಎಂಬುದು ಇವರ ಚಿಂತೆಯಾಗಿದೆ.

ಸಾಮಾನ್ಯವಾಗಿ ಅರಣ್ಯಗಳಲ್ಲಿ ಸಿಗುವಂತಹ ಬಿದಿರಿನಿಂದಲೇ ಬಂಡಿ ಕಕ್ಕೆಲು * ತಯಾರಿಕೆಯಲ್ಲಿ ಅತ್ಯಂತ ಚತುರ ಕೌಶಲ್ಯವನ್ನು ಮೆರೆದಿದ್ದಾರೆ ಸಾಮಾನ್ಯವಾಗಿ ಇಂದು ಮೇದಾರರು ನಗರಗಳಲ್ಲಿ ನೆಲೆಯಾಗಿರುವುದರಿಂದ ಅರಣ್ಯಗಳಿಂದಲೇ ಬಿದಿರನ್ನು ತಂದು ಇಲ್ಲೇ ತಯಾರಿಸುತ್ತಾರೆ. ಬಿದಿರು ಬೆತ್ತಗಳಿಂದ ತಯಾರಿಸುವ * ವಿವಿಧ ನಮೂನೆಯ ವಸ್ತುಗಳು ತುಂಬ ಕಲಾತ್ಮಕವಾಗಿ, ನಾಜೂಕಾಗಿ ಇರುತ್ತವೆ ಆಧುನಿಕತೆಯ ಸ್ಪರ್ಶದಿಂದ ಹಲವಾರು ಬಗೆಯಲ್ಲಿ ಆಧುನಿಕ ಶೈಲಿಯ ಚಂದ್ರಿಕೆ ತಪ್ಪೆ, ಚಾಪೆಗಳನ್ನು ರೇಶ್ಮೆಯನ್ನು ಹಾಕಿ ಸಿದ್ದಪಡಿಸುತ್ತಾರೆ. ದಿನನಿತ್ಯ ಜೀವನಲದಲಿ ಅಗತ್ಯವಾಗಿರುವಂತಹ ಬೇಲಿತಟ್ಟೆ, ದಾಡಿದಬ್ಬೆ, ಅಡಿಕೆ, ತೊಟ್ಟಿಲು, ಧ್ಯಾನ್ಯದ ಕಣಜ, ಕೇರುವ ಮರ ಮೀನು ಮಂಕರಿ ಚಾಳಿಸುವ ಮಂಕರಿ, ಕಾಯಕುಕ್ಕೆ ಅನ್ನದ ಕುಕ್ಕೆ ಗೊಡೆ ಮಾವಿನ ಬುಟ್ಟೆ ಮಂಚಗಳು,

ವಾಣಿ ಮುಂತಾದವುಗಳನ್ನು ಪರಿಸ್ಥಿತಿಗೆ ಹೊಂದಿಕೊಂಡಂತೆ ಮೇದಾರರು ತಮ್ಮ ಸಾಂಪ್ರದಾಯಿಕ ವೃತ್ತಿಯಲ್ಲಿನ ನಷ್ಟವನ್ನು ಮನಗಂಡು ಹಲವು ಬಗೆಯ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾರೆ.

ಯಾವುದೇ ಒಂದು ಬುಡಕಟ್ಟು ಸಮುದಾಯವನ್ನು ಅಧ್ಯಯನಿಸಲು ಹೊರಟಾಗ ಅಲ್ಲಿನ ಹಲವಾರು ಬದಲಾವಣೆಗಳವತ್ತವೂ ಗಮನ ಹರಿಸುವುದು ಉಚಿತ. "ಮೇದಾರ" ಬುಡಕಟ್ಟನ್ನು ಕುರಿತಂತೆ ಅಧ್ಯಯನ ಹಾಡುಗಳಲ್ಲಿ ವಾಸಿಸುತ್ತಿದ್ದು, ಇವರು ಆಧುನಿಕತೆಗೆ ಮರುಳಾಗಿ 1 ಮೇದಾರಕೇರಿಗಳನ್ನು ಮಾಡಿಕೊಂಡಿದ್ದರು ಅಂದರೆ ವಿವಿಧ ಬಗೆಯ ಬದಲಾವಣೆಯನ್ನು ಹೊರತಾಗಿಯೂ ಇವರು ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ.

<u>ಹಕ್ಕಿ–ಪಿಕ್ಕಿಯರು:–</u>

ಹಕ್ಕಿಪಿಕ್ಕಿಯರು ಪ್ರಧಾನವಗಿ ಬೇಟೆಯನ್ನೆ ತಮ್ಮ ಮೂಲ ಕುಲಕಸುಬಾಗಿ ಹೊಂದಿರುವ ಬುಡಕಟ್ಟು ಸಮುದಾಯ, ಸದಾ ಒಂದೊಂದು ಪ್ರದೇಶಗಳಿಗೆ ಬಿಟ್ಟು ಬಿಡದೆ ನಿರಂತಕವಾಗಿ ಚಲಿಸುತ್ತಲೆ ಇವರು ಜೀವನ ಸಾಗಿಸುತ್ತಾರೆ. ಭಾರತದ್ಯಾಂತ ಸುಮಾರು ಭಾಗಗಳಲ್ಲಿ ಕಂಡು ಬರುವ ಇವರು ಕರ್ನಾಟಕದಲ್ಲಿ ವಿಶೇಷವಾಗಿ ಬೆಂಗಳೂರು, ಮೈಸೂರು, ವಿಜಾಪೂರ, ಮಂಡ್ಯ, ಚಿಕ್ಕಮಂಗಳೂರು, ಬಳ್ಳಾರಿ, ಹಾಸನ, ಬೀದರ್, ಧಾರವಾಡ ಹಾಗೂ ಗುಲಬರ್ಗ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಭಾರತದ ಉದ್ದಾಲಕ್ಕೂ ಕಾಡು ಮಾರ್ಗಗಳಲ್ಲಿ ಓಡಾಡಿಕೊಂಡು ವ್ಯಾಪಾರ ಮಾಡುತ್ತಿದ್ದ ಲಂಬಾಣಿ, ಬನಿಯಾ, ಬೋಹರಾ, ಪಾರ್ಸಿ, ಸಾದಾಗರ್ ಮುಂತಾದ ಬುಡಕಟ್ಟುಗಳು ಬ್ರಿಟಿಷರ ರಸ್ತೆ ಅಭಿವೃದ್ಧಿಯಿಂದಾಗಿ ಆಘಾತಗೊಂಡು ತೀವ್ರ ನಿರುದ್ಯೋಗ ಸಮಸ್ಯಗೆ ಒಳಗಾದವು. ಈ ಸಂದರ್ಭದಲ್ಲಿ ಬ್ರಿಟೀಷ್ ಸರಕಾರವು ಅವರಿಗೆ ಪರ್ಯಾಯ ಉದ್ಯೋಗ ವ್ಯವಸ್ಥೆಯನ್ನು ಸೃಷ್ಟಿಸಿದೆ. ಹೊಟ್ಟೆಪಾಡಿಗಗಿ ಅವರು ಮಾಡುತ್ತಿದ್ದ ಸಣ್ಣಮಟ್ಟ ಕಳ್ಳತನವನ್ನೇ ತೀವ್ರವೆಂದು ಪರಿಗಣಿಸಿ ಈ ಬುಡಕಟ್ಟುಗಳನ್ನು ಹತ್ತಿಕ್ಕಲು 1871 ರಲ್ಲಿ ಕ್ರಿಮಿನಲ್ ಆ್ಯಕ್ಟನ್ನು ಜಾರಿಗೆ ತಂದಿತು. ಈ ಪಟ್ಟಿಯಲ್ಲಿ ಬೌರಿಯ, ಮಾರವಾಡ, ಅಥವಾ ಗುಜರಾತ ಭೌರಿಯಾ, ಪಣಿಯರು, ಬಂಜಾಕಿಯರು, ಬೇಡರು, ಬಿಲ್ಲರು, ಕಾಡಿಯರು, ಕೋಳಿಯರು, ಮಾರಿಗೆ, ರಾಮೋಳಿಯರು, ವಡ್ಡರು, ಪಾರದಿಯರು (ಹಕ್ಕಿಪಿಕ್ಕಿ), ವಾಘ್ರಿಯರು, ಮುಂತಾದ ಬುಡಕಟ್ಟುಗಳನ್ನು ಗುರುತಿಸಿ ಅವರ ಮೇಲೆ ನಿಗಾ ಇಡಲು ಪೋಲಿಸರನ್ನು ಜಾಗೃತಗೊಳಿಸಲು "ನಾಯಕ, ಡಿ.ಬಿ .2000 18,) ಹೀಗೆ ಸಮಾಜ, ಸರಕಾರಗಳ ಕೆಂಗೆಣ್ಣಿಗೆ ಬಲಿಯಾದವರಲ್ಲಿ ಹಕ್ಕಿಪಿಕ್ಕಿ ಸಮುದಾಯವು ಒಂದು.

ಪಾರದಿ ಎಂದು ಗುರುತಿಸಲಾಗುವ ಹಕಿ-ಪಿಕ್ಕಿಯರು ಭೌರಿಯಾ ಎಂಬ ಬುಡಕಟ್ಟು ಸಮುದಾಯದ ಕವಲೊಡೆದ ಭಾಗವಾಗಿದೆ. ಇವರು ಜಾತ್ಯಾ ಬೇಟೆಗಾರರಾಗಿದ್ದರಿಂದ ಇವರಿಗೆ ' ಪಾರಧಿ' ಎಂಬ ಹೆಸರು ಬಂದಿದೆ. ಮಧ್ಯ ಭಾರತದ ಲಂಗೋಟಿ 'ಘಾರದಿ' ಯರಗಿಂತ ಇವರು ಭಿನ್ನ ಉರ್ಲು ಹಾಕಿ ಹಿಂದಿ, ಚಿಗರೆ ಮುಂತಾದ ಶ್ವಾ ಪದಗಳನ್ನು ಹಿಡಿಯುವವರಿಗೆ ಪಾರದಿ ಅಥವಾ ಮೇವಾರಿ ಎಂದು ಕರೆಯುತ್ತಾರೆ. 2) ಇಂತಹ 'ಘಾಸಪಾಕದಿ' ಯರಿಗೆ 'ಪಾಡುಪರಧಿ' ಅಂದರೆ

ಗುಡಾರದ ಗುಡಿಸಲಲ್ಲಿರುವವರು) 'ಲಂಗೋಟಿ ಪಾರಧಿ' ಅಥವಾ 'ಗಾಯ ಪಾರಧಿ' (ಕಲಿಸಿದ ಹಿಂದೆ ಅಡಗಿ ಹೋಗಿ ಚಿಗರಿ ಮುಂತಾದವನ್ನು ಹಿರಿಯುವವರು) ಎಂದು ಸಹ ಕರೆಯುತ್ತಾರೆ. 3) ಕೆಲವು ಪಾಸ ಪಾರಧಿಯರಿಗೆ 'ಹರಣಶಿಕಾರಿ' ಅಡವಿಪಂಚರು ಅಥವಾ ಚಿಗರಿ ಬೇಟೆಗರರು ಎಂದು ಕರೆಯುತ್ತಾರೆ. ತೇಲವೆ ಚಣಾ, ಚಾಕಣಿಕರರು ಇದೇ ಗುಂಪಿನ ಜನರಗಿದ್ದಾರೆ. ಆದರೆ ದಿನಾಲೂ ಒಂದೊಂದು ಪ್ರದೇಶಗಳಿಗೆ ವಲಸೆ ಹೋಗುತ್ತಿರುವ ಇವರ ಜನಸಂಖ್ಯೆಯ ಬಗ್ಗೆ ನಮಗೆ ನಿಬರವಾದ ಉತ್ತರಸಿಗುತ್ತಿಲ್ಲ.

ಪಾಣಪರಿಕ ನಂಬಿಕೆಯಂತೆ ಆಧುನಿಕ ನಾಗರೀಕ ಜೀವನದಲ್ಲಿಯೂ ಹಕ್ಕಿಪಕ್ಕಿಯರು ಜನರ ದೃಷ್ಟಿಯಲ್ಲಿ ಕಳ್ಳರಾಗಿಯೇ ಅನುಮಾನದಿಂದ ಕಾಣಲಾಗುತ್ತಿರುವ ಸಮುದಾಯವಾಗಿದ್ದಾರೆ. ಇಂದಿಗೂ ಇವರಲ್ಲಿ ಕೆಲವರು ಕಳ್ಳತನಗಳಿಗೆ ಬಲಿಯಾಗಿರುವುದರಿಂದ ಈಡೀ ಸಮುದಾಯವನ್ನೆಸಂಗಿಯದಿಂದ ನೋಡುವಂತೆ ಮಾಡಿದೆ. ಆದ್ದರಿಂದಲೆ ಇವರು ನಗರ, ಗ್ರಾಮಿಗಳೀಗೆ ದೂರದಲ್ಲೆ ಇರುವಂತಾಗಿದೆ. ಇಲ್ಲಿಯೂ ಸಹ ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು ಬಿಡದೆ ಯಥಾವತ್ತಾಗಿ ತಮಗೆ ಅವಶ್ಯವಿರುವ ಬೇಟೆಗಾಗಿ ಅವಕಾಶವಿರುವಲ್ಲಿ ವಾಸಸ್ಥಾಳ ನಿರ್ಮಿಸಿಕೊಳ್ಳತ್ತಿದ್ದಾರೆ.

ಹಕ್ಕಿಪಕ್ಕಿಯರಲ್ಲಿ ಮುಖ್ಯವಾಗಿ ಎರಡು ಉಪ ಪಂಗಡಗಳೀವೆ. ಅವುಗಳೆಂದರೆ ಜಾಲ್, ಬುಕ್ಕಾ ಎಂದು ಹೇಳಲಾಗಿದೆ. ಈ ಪಂಗಡಗಳು ಕೆಲವು ಪ್ರಮುಖ ಗೋತ್ರ ಹಾಗೂ ಹಲವಾರು ಬಳೀಗಳನ್ನು ಹೊಂದಿವೆ. ಮೂಡ್, ರಾಣೋ, ಪವಾರ ಹಾಗೂ ವಡಪ್ಪಾ ಇವು ಒಂದು ಪಂಗಡವಾಗಿದ್ದು 'ಜಾಲ್' ಎಂದು ಕರೆಯಿಸಿಕೊಂಡರೆ 'ಬುಕ್ಕಾ' ಮತ್ತೊಂದು ಪಂಗಡವಾಗಿದ್ದು ಅದೇ ಹೆಸರಿನಿಂದ ಗುರುತಿಸಿಕೊಳ್ಳತ್ತದೆ.

ಸಾಮಾನ್ಯವಾಗಿ ಹಕ್ಕಿಪಕ್ಕಿಯರು ಮೂಲ ಕಸುಬನ್ನಾಗಿ ಬೇಟೆಗಾರಿಕೆಯನ್ನೆ ಅವಲಂಬಿಸಿರುವಂತಹವರು. ಬೇಟೆಯ ನಂತರ ಅದರಿಂದ ಬರುವ ಉತ್ಪನ್ನಗಳನ್ನು ಪೇಟೆಯಲ್ಲಿ ಮಾರಿ ಅವರಿಂದಲೆ ತಮ್ಮ ಉಪಜೀವನ ನಡೆಸುವಂತವರಾಗಿದ್ದಾರೆ. ಅಲೆಮಾರಿಯಾಗಿರುವ ಇವರು ಸಕುಟುಂಬ ಸಮೇತ ಊರೂರು ಅಲೆಯುತ್ತಾರೆ. ಸಣ್ಣಮಟ್ಟ ಗಿರಿಕಂದರಗಳು, ಗಿಡಗಂಟಿಗಳಿರುವ ಜನವಸತಿಯಿಂದ ತುಂಬ ದೂರವಿರುವಲ್ಲಿಯೇ ಇವರ ಬಿಡಾರವಿರುತ್ತಿದೆ. ಏಕೆಂದರೆ ಇದು ಅವರ ಬೇಟೆ ಹಾಗು ಪಶುಸಂಗೋಪನೆಗೆ ತುಂಬ ಸಹಕಾಯಾಗಿದೆ. ಅರಣ್ಯ ಸಂರಕ್ಷಣೆಯಿಂದ ಬೇಟೆಗಾರಿಕೆ ನಿಷೇಧಿಸಿದ ನಂತರ ಇವರಿಗೆ ಕಾಡಿಗೊಂದಿಸಿದ್ದ ಭಾವನಾತ್ಮಕ ಸಂಬಂದ ಕಡಿದು ಹೋಗಿದೆ. ಒಂದು ಕಡೆ ಈ ಬಗೆಯ ಸ್ಥಿಯಿ ಇದ್ದರೆ ಮತ್ತೊಂದು ಕಡೆಯಲ್ಲಿ ನಾಗರೀಕ ಜೀವನದೊಂದಿಗೆ ಬದುಕದೆ ಅವರ

ಸಂಶಯಕ್ಕೆ ಬಲಿಯಾಗುತ್ತಿದ್ದಾರೆ. ಕಾಡಿನೊಡನೆ ಸಂಬಂಧಿವಿಲ್ಲಾದಿರುವುದರಿಂದ ಇವರು ವ್ಯವಸಾಯ, ಕೂಲಿ, ಕೃಷಿಕಾರ್ಯಗಳಲ್ಲಿ ತೊಡಗಿದ್ದಾರೆ.

ತಿರುಗಾಡುವುದರಲ್ಲೇ ತೊಡಗಿರುವ ಹಕ್ಕಿಪಿಕ್ಕಿಯರು ವಸ್ತ್ರಹೀನರು ಮತ್ತು ಹೊಲಸು ಜನರು. ಅವರು ತಲೆಯ ಕೂದಲನ್ನು ಎಂದೂ ಬಾಚಿಕೊಳ್ಳುವುದಿಲ್ಲ, ಮತ್ತು ತೆಲೆ ಗಡ್ಡವನ್ನು ಹಾಗೆಯೇ ಬಳನೀವರು. ಕೆಲವು ಹೆಂಗಸರು ಮಹಾರಾಷ್ಟ್ರದ ಹೆಂಗಸರಂತೆ ನೇರೆ ಉಟ್ಟು ಕುಪ್ಪಸವನ್ನು ತೊಟ್ಟುಕೊಳ್ಳುವರು ಉಳಿದವರು ಲಂಗ ಕುಪ್ಪಸವನ್ನು ಹಾಕಿಕೊಳ್ಳುವರು, ಗಂಡಸರೂ, ಹೆಂಗಸರು ಕೊರಳಲ್ಲಿ ಬಣ್ಣದ ಮಣಿಗಳ ಸರಗಳನ್ನು ಕೈಯಲ್ಲಿ ಕಂಚಿನ, ತವರದ ಇಲ್ಲವೆ ಹಿತ್ತಾಳೆಯ ಬಳೆಗಳನ್ನು ಕಿವಿಯಲ್ಲಿ ಜಾವಲಿ ಮತ್ತು ಸರಪಳಿಗಳನ್ನು ಹಾಕಿಕೊಳ್ಳುವರು ಗಂಡಸರು ಉಟ್ಟ ಅಥವಾ ಹೊಟ್ಟುಕೊಳ್ಳುವ ವಸ್ತ್ರವು ಮತ್ತು ಮೈಯಲ್ಲಿ ಹಾಕಿದ ಅಂಗಿಯಾ ಹೊಲಸಾಗಿ ಕಂದು ಬಣ್ಣ ಹಾಕಿದ ಹಗೆ ಕಾಣಿಸುವುದು. ಕೆಲವು ಹೆಂಗಸರು ಬಡಗುಜರಾತಿಯರಂತೆ ಲಂಗವನ್ನುಟ್ಟು ಒಂದು ವಸ್ತ್ರವನ್ನು ಲಂಗದ ಮೇಲೆ ಸುತ್ತ ಸೆರಗನ್ನು ತೆಲೆಯ ಮೇಲಿಂದ ಹೆಗಲ ಮೇಲಿನವರೆಗೆ ತರುತ್ತಾರೆ (ಹಳದಿಪರ 1914–92 ಉದ್ಧೃತ ನಾಯಕ ಡಿ.ಬಿ) ಪೂರ್ವದ ಅವರ ಉಡುಗೆ ತೊಡುಗೆಗಳ ಇಂದಿಗೂ ಮುಂದುವರೆದು ಬಂದಿವೆ. ಅಲ್ಲವೆ ಅನ್ನ ಸಂಸ್ಕೃತಿಗಲ ಪ್ರಭಾವದಿಂದಾಗಿ ಅನೇಕ ಹೊಸ ಬಗೆಯ ಉಡುಗೆ ತೊಡುಗೆಗಳು ಸೇರಿಸಿಕೊಂಡಿದ್ದಾರೆ.

ಭಾರತದಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಕಾಣಿಸಿಗುವ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಹಕ್ಕಿಪಿಕ್ಕಿ ಸಮುದಾಯದಲ್ಲಿದೆ. ಈ ವ್ಯವಸ್ಥೆಯಲ್ಲಿ ಮಹಿಳೆಯೇ ಕೌಟುಂಬಿಕ ಅಧಿಕಾರ ಕೇಂದ್ರದ ಅಧಿಪತಿಯಾಗಿರುತ್ತಾಳೆ. ಆದರೆ ಇವರಲ್ಲಿ ಅಳಿಯ ಸಂತಾನ ಪದ್ಧತಿ ಇಲ್ಲಿದಿದ್ದರೂ ಮಾತೃ ಪ್ರಧಾನತೆಯ ಬೇರುಗಳು ಗಟ್ಟಿಯಾಗಿವೆ. ರಕ್ತ ಸಂಬಂಧಗಳ ಮೂಲಕವೆ ಇದರಲ್ಲಿ ಬಂಧುತ್ವಗಳು ಏರ್ಪಡುತ್ತವೆ. ಮಾತೃಪ್ರಧಾನ ಪರಿಕಲ್ಪನೆ ಹೊಂದಿರುವ ಇವರಲ್ಲಿ ತಾಯಿಯಿಂದರೆ ಹೆಚ್ಚಿನ ಸಂಬಂಧಗಳು ಹುಟ್ಟಿಕೊಳ್ಳುತ್ತವೆ. ಈ ವ್ಯವಸ್ಥೆಯಲ್ಲಿ ಗಂಡು ಇದ್ದರೂ ನಾಮಕಾವಾಸ್ತೆಯನ್ನುವಂತೆ ಅವನ ಪಾತ್ರವಿರುತ್ತದೆ. ಹಕ್ಕಿಪಿಕ್ಕಿಯರಲ್ಲಿ ಸ್ವಗೋತ್ರ ವಿವಾಹ ನಿಷೇಧವಾಗಿದೆ 'ಜಾತ್' ಮತ್ತು 'ಬುಕ್ಕಾ'ಗಳೆಂಬ ಪ್ರಮುಖ ಗೋತ್ರಗಳಿದ್ದು ಇವುಗಳ ನಡುವೆ ರಕ್ತಸಂಬಂಧ ಏರ್ಪಡುತ್ತದೆ. ಬಾಲ್ಯವಿವಾಹ ಪದ್ಧತಿ ಇವರಲ್ಲಿ ಇಂದಿಗೂ ಜೀವಂತವಾಗಿದೆ. ಇದರಲ್ಲಿ ಹೆಣ್ಣಿಗೆ ಅಧಿಕ ಬೇಡಿಕೆ ಇರುವುದೆ ಇದಕ್ಕೆ ಕಾರಣ. ಆದ್ದರಿಂದಲೆ ವಧುದಕ್ಷಿಣೆ ಪದ್ಧತಿ ಇಲ್ಲಿ ಕಾಣಬಹುದು.

ಹಕ್ಕಿಪಿಕ್ಕಿಯರಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಗಂಡು ಎಷ್ಟು ಸಲವಾದರೂ ಮದುವೆಯಾಗಬಹುದು ಆದರೆ ಹೆಣ್ಣಿಗೆ ಆ ಸ್ವಾತಂತ್ರವಿಲ್ಲ ಹೀಗೆ ಇಲ್ಲಿಯೂ ಲಿಂಗತಾರಮ್ಯವನ್ನು ನಾವು

ಕಾಣಬಹುದು. 'ಸೀರೆಯುಡಿಕೆ' ಎಂಬ ಪದ್ಧತಿಯೂ ಹಕ್ಕಿಪಿಕ್ಕಿಯರಲ್ಲಿ ತುಂಬ ಪ್ರಚಲಿತದಲ್ಲಿದೆ. ಇಲ್ಲಿ ತಮ್ಮನ ಹೆಂಡತಿ ವಿಧಿವೆಯಾದರೆ ಅಣ್ಣ ಅವಳನ್ನು ವರಿಸಬಹುದು ಹಾಗೆಯೇ ಅಣ್ಣನ ಹೆಂಡತಿ ವಿಧವೆಯಾದರೆ ತಮ್ಮ ಅವಳನ್ನು ಮಾಡಿಕೊಳ್ಳಬಹುದು. ಇಲ್ಲಿ ಹೆಣ್ಣಿಗೆ ಸ್ವತಂತ್ರವಾಗಿ ತನಗೆ ಯಾವ ಗಂಡು ಬೇಕು ಎಂದು ಆರಿಸಿಕೊಳ್ಳವ ಸ್ವಾತಂತ್ರ್ಯವಿದೆ ಆದರೆ ಗಂಡಿಗೆ ಅದಿಲ್ಲ. ಹಕ್ಕಿಪಿಕ್ಕಿಯರು ಸಾಮಾನ್ಯವಾಗಿ ಏಕಪತ್ನಿತ್ವವನ್ನೇ ಹೊಂದಿರುತ್ತಾರೆ. ತಮ್ಮ ಗಂಡಿಗಿಂತ ಬೇರೆ ಹಟ್ಟಿಯ ಗಂಡನ್ನೆ ಇಲ್ಲಿಯ ಮಹಿಳೆಯರು ಇಷ್ಟಪಡುತ್ತಾರೆ. ಅಂತರ್‌ಜಾತಿ ವಿವಾಹ ಇವರಲ್ಲಿ ನಿಷ್ಪದ್ಧವಿದೆ. ಹಾಗೇನಾದರೂ ಅದರಲ್ಲಿ ಅಂತಹವರನ್ನು ಜಾತಿಯಿಂದ ಹೊರಗೆ ಹಾಕುತ್ತಾರೆ.

ಹಕ್ಕಿಪಿಕ್ಕಿಯರು ಪ್ರಕೃತಿಯ ಮಡಿಲಲ್ಲೆ ಇರುವವರಾಗಿದ್ದರಿಂದ ಸ್ಥಳಿಯವಾಗಿ ದೊರೆಯುವಂತಹ ವನಸ್ಪತಿ, ಗಿಡಮೂಲಿಕೆಗಳನ್ನು ಔಷದೋಪಚರಗಳಿಗಾಗಿ ಬಳಸುವುದಂತು ಬೇಟೆಯನ್ನೆ ಅತಿಯಾಗಿ ಪ್ರೀತಿಸುವ ಇವರಿಗೆ ಹಕ್ಕಿಪಿಕ್ಕಿಯರು ಜನಪದ ವ್ಯಸ್ಥ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ. ಜನಪದದ ಅನುಭವ ಇದಕ್ಕೆ ಆಧಾರವಾಗಿದೆ. ಆದ್ದರಿಂದಲೆ ಇವರು ಜನಪದ ವೃದ್ಯ ಪದ್ಧತಿಯನ್ನು ಜೀವನ ಸುಗಮವಾಗಿ ಸಾಗಿಸಲೆಂದೆ ತಮ್ಮ ಉಪಜೀವನದ ಭಾಗವಾಗಿ ಅವನ್ನು ಬಳಸಿಕೊಳ್ಳುತ್ತಿದ್ದಾರೆ. ವೃದ್ಯಪದ್ಧತಿಯಾ ಅವರ ಬೇಟೆಗಾರಿಕೆಯಿಂತೆಯೇ ಕುಲಕಸುವಗಿ ಪರಿವರ್ತಿತವಾಗಿದೆ. ಇಂದಿನ ಆಧುನಿಕ ಜೀವನದಲ್ಲಿ ಪರಿಚಯವಿರದ ಎಷ್ಟೋ ಔಷಧಿಗಳು ಇವರಲ್ಲಿ ಸಿಗುತ್ತವೆ.

ಬೇಟೆಯಾಡುತ್ತಲೆ ತಮ್ಮ ಸಾಂಸ್ಕೃತಿಕ ಅನನ್ಯತೆಗೆಯನ್ನೆ ಮುಂದುವರೆಸಿಕೊಂಡು ಬರುತ್ತಿರುವ ಹಕ್ಕಿಪಿಕ್ಕಿಯರ ಆಡಳಿತ ವ್ಯವಸ್ಥೆಯಾ ಸಹ ತುಂಬ ವಿಶಿಷ್ಠವಾಗಿದೆ. ಪಾರಂಪರಿಕವಾಗಿ ಸಾಗಿ ಬಂದಿರುವ ತಮ್ಮ ಹಿರಿಯರ ನೀತಿ ನಿಯಮ ಕಾನೂನು ಕತ್ತಳೆಗಳನ್ನೆ ಇವರು ಇಂದಿಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಎಲ್ಲಾ ಸಮುದಾಯ ತನ್ನ ಆಡಳಿತದಲ್ಲಿ ಸಹಾಯಕರನ್ನಾಗಿ ಅವನು ಕಾರಿಭಾರಿ, ಡಾವ್‌ರುಗಳೆ ಪ್ರಮುಖರಾಗಿರುತ್ತಾರೆ. ಇಲ್ಲಿ ನಾಯಕನಾದವನ ಹುದ್ದೆಯಾ ತನ್ನ ನಂತರ ತನ್ನ ಮಗನಿಗೆ ವಂಶಪಾರಂಪರವಾಗಿ ನಡೆದುಕೊಂಡು ಬರುತ್ತದೆ. ಹಟ್ಟಿಯ ಹಿರಿಯರನ್ನು 'ಡಾವ್' ಎಂದು ಕರೆಯುವರು ವಾಸ್ತವವಾಗಿ ಇವರೆ ಅಲ್ಲಿನ ದೃವ ಸಮುದಾಯಕ್ಕೆ ಸಂಬಂಧಿಸಿದಂತಹ ಎಲ್ಲಾ ಬಗೆಯ ಕಾರ್ಯಚಟುವಟಿಕೆಗಳು, ಹೊಣೆಗಾರಿಕೆಗಳೆಲ್ಲವೂ ನಾಯಕನಿಗೆ ಸಂಬಂದಿಸಿರುತ್ತವೆ. ಸಮುದಾಯದ ಯಾವುದೆ ಬಗೆಯ ಸಮಸ್ಯೆ ಇದ್ದರೂ ಸಹ ಅದನ್ನು ನ್ಯಾಯ ಪಂಚಾಯಿತಿ ಅಥವಾ ದೃವತೆಯರಿಗೆ ನಿರ್ಣಯಿಸಲಾಗುವುದು ಸಮುದಾಯದ ವಿರುದ್ಧ ತೊಡಗಿದವರಿಗೆ, ಕಟ್ಟಳೆಗಳನ್ನು ಮೀರಿದವರಿಗೆ ಪಕ್ಕ ಶಿಕ್ಷೆಯನ್ನು ಇಲ್ಲಿ ನೀಡುತ್ತಾರೆ.

ಬದಲಾವಣೆ ಎಂಬುದು ನೈಸರ್ಗಿಕ ನಿಯಮ ಪ್ರಪಂಚದಲ್ಲಿ ಪ್ರತಿಯೊಂದು ನಿತ್ಯ ಪರಿವರ್ತನಾ ಶೀಲವಾಗಿಯೇ ಇರುತ್ತವೆ ಎಂಬುದು ಸಾಮಾನ್ಯ ನಂಬಿಕೆ ಬದಲಾವನೆ ಗಾಳಿ ಎಷ್ಟೆ ಜೋರಾಗಿ ಬೀಸಿದರೂ ಸಹ ಸಮಾಜ ಮಾತ್ರ ಸ್ಥಿರವಾಗಿ, ಗತಿಶೀಲವಾಗಿ ನಿಂತಿರುತ್ತದೆ. ಇಂತಹ ಚಲಾವನೆ ಕೆಲವೊಮ್ಮ ಮೆಲ್ಲನೆ ಕಂಡು ಬಂದರೆ. ಇನ್ನು ಕೆಲವು ಸಾಲಿ ತೀವ್ರವಾಗಿ ಕಂಡು ಬರುತ್ತದೆ. ಬದಲಾವನೆಯಿಂದ ದೂರ ಉಳಿಯರು ಯಾವ ಸಮುದಾಯಕ್ಕೂ ಸಾಧ್ಯವಿಲ್ಲ, ಗ್ರಾಮ ನಗರಗಳು ಶರವೇಗದಲ್ಲಿ ಬದಲಾಗುತ್ತಿದ್ದರೆ ಬುಡಕಟ್ಟಿನ ಸಂಸ್ಕೃತಿಗಳು ಮಂದಗತಿಯಲ್ಲಿ ಬದಲಾವನೆಗೆ ಮೈಯನ್ನು ನೀಡುತ್ತಿವೆ. ಇದರಿಂದ ಹಕ್ಕಿಪಿಕ್ಕಿ ಸಮುದಾಯವು ಹೊರಗಿಲ್ಲ ಎನ್ನಬಹುದು.

ಕಾಡುಮೇಡು, ಬೇಟೆಗಾರಿಕೆಯಂತಹ ಕಾರ್ಯಗಳಲ್ಲೆ ಕಾಲ ಕಳೆಯುತ್ತಿದ್ದಾ ಹಕ್ಕಿಪಿಕ್ಕಿ ಸಮುದಾಯವಿಗೆ ಆಧುನಿಕತೆಯಿತೆಗೆ ಮಾಡುತ್ತಿದೆ. ಇವರ ಅಲೆಮಾರಿ ಬದುಕು ಈಗ ಸ್ಥಿರವಾಗಿ ನೆಲೆನಿಂತಿದೆ. ಸಾಂಪ್ರದಾಯಿಕ ವ್ಯಕ್ತಿಯ ಬದಲಿಗೆ ವ್ಯಾಪಾರಿ ಬದುಕನ್ನೆ ಅಳವಡಿಸಿಕೊಂಡಿದ್ದಾರೆ. ಆಧುನಿಕತೆಗೆ ಶರಣಾಗಿರುವ ಇವರಿಗೆ ಹೊಸಬಗೆಯ ಆಲೋಚನೆ, ಫಲವಾಗಿ ತೀವ್ರವಾಗಿ ಬದಲಾವಣೆಗೆ ಒಳಗಾಗುತ್ತಿದ್ದಾರೆ. ಸ್ವಾತಂತ್ರ್ಯನಂತರದಲ್ಲಿನ ಭಾರತ ಸರಕಾರದ ಅರಣ್ಯ ನೀತಿಯಿಂದಾಗಿ ಇವರು ಪಾರಂಪರಿಕವಾಗಿ ಉಳಿಸಿಕೊಂಡು ಬೆಳಿಸಿಕೋಮಡು ಬಂದಿದ್ದ ವೃಕ್ತಿ, ಕಾಡನ್ನ ತೊರೆಯಿಬೇಕಾಗಿ ಬಂದಿತು. ಒಂದು ಕಡೆ ಇದು ವರವಾಗಿದ್ದರೆ ಇನ್ನೊಂದು ಕಡೆ ಶಾಪವಾಗಿ ಪರಿಣಮಿಸಿತು ಸರಕಾರಿ ಯೋಜನೆಗಳನ್ವಯ ಒಂದು ಕಡೆ ಎಲ್ಲರಂತೆ ಸ್ಥಿರವಾಗಿನಿಲ್ಲರು ಅವಕಾಶ ದೊರೆತರೆ, ಮತ್ತೊಂದು ಕಡೆ ಪ್ರಕೃತಿಯ ಮಡಿಲಲ್ಲಿದ್ದ ಅನನ್ಯತೆ, ಭಾವನಾತ್ಮಕ ಸಂಬಂಧಗಳು ಕರಗಿಹೋದವು ಕೂಲಿನಾಲಿ ಮಾಡುತ್ತಿವೆ ಬದುಕು ಸಾಗಿಸುವ ಸ್ಥಿತಿ ಇವರಿಗೆ ಒದಗಿತು ಹಿಂದಿನ ತಮ್ಮ ಮನೆಗಳ ಆಕಾರವೆ ಬದಲಾಯಿತಲ್ಲದೆ. ಇವರ ಆಹಾರ, ಉಡುಗೆ ತೊಡುಗೆ, ಆಚಾರ ವಿಚಾರ, ನ್ಯಾಯ ಪಂಚಾಯಿತಿ, ಸಂಪ್ರದಾಯಿಗಳಲ್ಲಿಯೂ ಬದಲಾವನೆ ಆಯಿತು. ಆಧುನಿಕತೆಯ ಪರಿಪರಗಳಾದ ಡಿ.ವಿ.ರೇಡಿಯೋ, ಪೇಪ್ರೆಕಾರ್ಡರ್‌ಗಳನ್ನು ಬಳಸತೊಡಗಿದರು ಶಾಲೆಯ ಮುಖವನ್ನೆ ಕಾಣದ ಇಬರ ಮಕ್ಕಳು ವಿದ್ಯಾವಂತರಾಗುತ್ತ ಬರುತ್ತಿದ್ದಾರೆ. ಹಿಂದಿನಿಂದಲೂ ಇವರನ್ನು ದರೋಡೆಕೋರರಂತೆ ಕಾಣಲಾಗುತ್ತಿದ್ದತ್ತು ಆದರೂ ಇಂದಿಗೂ ಹಲವಡೆ ಅದೇ ಸ್ಥಿತಿ ಇದೆ. ಇಂತಹ ಸಾಮಾಜಿಕ ಮನಸ್ಸುಗಳು ಬದಲಾಗಿ ಇವರೂ ಸಹ ಸಮಾಜದ ಭಾಗವಾಗಿರುವುದರಿಂದ ಸಮಾಜದ ಮುಖ್ಯವಾಹಿನಿಗೆ ತಂದು ಪ್ರಯತ್ನಿಸಬೇಕು.

ಕರ್ನಾಟಕದಲ್ಲಿ ಸುಮಾರು 50 ಕ್ಕಿಂತ ಹೆಚ್ಚಿನ ಬುಡಕಟ್ಟುಗಳು ವಾಸಿಸಿರುವುದು ಕಂಡುಬರುತ್ತದೆ. ಕರ್ನಾಟಕ ಸರ್ಕಾರ ಬುಡಕಟ್ಟುಗಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ. ಆದರೆ ಆ ಯೋಜನೆಗಳು ಕೇವಲ ಯೋಜನೆಗಳಾಗಿಯೇ ಉಳಿದಿವೆ. ಅಲ್ಲದೆ ಅನೇಕ ಸರ್ಕಾರೇತರ ಸಂಘ ಸಂಸ್ಥೆಗಳು ಸಹ ಈ ಬುಡಕಟ್ಟುಗಳಿಗೆ ಅಭಿವೃದ್ಧಿ ಪಡಿಸಲು ಅನೇಕ ಯೋಜನೆಗಳನ್ನು ಹಾಕಿಕೊಂಡರೂ ಸಹ ಅವು ಇಂದು ಸಫಲವಾಗುತ್ತಿಲ್ಲ. ಅವು ಕೇವಲ ಸರ್ಕಾರದ ದಾಖಲು ಪುಸ್ತಕದಲ್ಲಿ ಮಾತ್ರ ಆ ಯೋಜನೆಗಳು ಸಫಲವಾಗಿರುತ್ತವೆ ಹೊರತು, ಬುಡಕಟ್ಟುಗಳ ಬದುಕು ಅತ್ಯಂತ

ಕೆಳಮಟ್ಟಕ್ಕಿಳಿದಿದೆ. ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಈ ಬುಡಕಟ್ಟುಗಳು ವಾಸವಾಗಿ ತಮ್ಮ ಬದುಕನ್ನು ಸಾಗಿಸುತ್ತಿರುವುದು ಕಂಡು ಬರುತ್ತದೆ. ನಾಡಿನಾದ್ಯಂತ ಅತ್ಯಂತ ಶ್ರೀಮಂತ ಜಿಲ್ಲೆ, ಗಣಿ ಧಣಿಗಳ ನಾಡೆಂದು ಪ್ರಸಿದ್ಧ ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು 31 ಬುಡಕಟ್ಟುಗಳು ಕಂಡು ಬರುವವು. ಅದು 1991ರ ಜನಗಣಾಡಿಯ ಹಿನ್ನೆಲೆಯಲ್ಲಿ ದಾಖಲಾಗಿದೆ. ಈ 31 ಬುಡಕಟ್ಟು ಪಂಗಡಗಳಲ್ಲಿ ಇಡೀ ಜಿಲ್ಲೆಯ ಬುಡಕಟ್ಟು ಪಂಗಡಗಳ ಜನಸಂಖ್ಯೆ ಶೇ. 97 ರಷ್ಟು ವಾಲ್ಮೀಕಿ. ನಾಯಕ, ಬೇಡ ಪಂಗಡಕ್ಕೆ ಸೇರಿದ್ದೂ ಉಳಿದ ಶೇಕಡ 3 ರಷ್ಟು ಇತರ 30 ಬುಡಕಟ್ಟುಗಳಿಗೆ ಸೇರಿರುವುದು ದೃಢಪಟ್ಟಿದೆ. ಬಳ್ಳಾರಿ ಜಿಲ್ಲೆ ಕೆಲವೇ ಗಣಿಧಣಿಗಳ ಶ್ರೀಮಂತಿಕೆಯಿಂದ ಮೆರೆಯುವರು ಆದರೆ ಸಾಮಾನ್ಯ ಜನತೆಯ ಜೀವನದ ಸ್ಥಿತಿ ತುಂಬಾ ಶೋಚನೀಯ ಸ್ಥಿತಿಯಲ್ಲಿದೆ. ಕಾಲಕ್ಕೆ ತಕ್ಕಂತೆ ಸರಿಯಾದ ಮಳೆಯಾಗದೇ ಇರುವುದರಿಂದ ಇಲ್ಲಿಯ ಜನರ ಬದುಕು ಅಪಾರ ಕಷ್ಟಮಯವಾಗಿದೆ. ಸರಿಯಾದ ಮಳೆಯಾಗದ ಕಾರಣ ಇಲ್ಲಿಯ ಜನತೆ ಬೇರೊಂದು ಕಡೆ ವಲಸೆ ಹೋಗುವುದು ಅನಿವಾರ್ಯವಾಗಿದೆ. ಇಂತಹ ಈ ಜಿಲ್ಲೆಯಲ್ಲಿ ಬುಡಕಟ್ಟು ಜನರ ಸ್ಥಿತಿಗತಿಯಂತೂ ತುಂಬಾ ನಿಕೃಷ್ಟಸ್ಥಿತಿಯಲ್ಲಿದೆ. ಇವರಿಗೆ ಯಾವುದೇ ರೀತಿಯಲ್ಲಿ ಮೂಲಭೂತ ಸೌಲಭ್ಯಗಳಿಲ್ಲದೆ ಪರದಾಡುವಂತಾಗಿದೆ. ಇವರಲ್ಲಿ ವಿದ್ಯಾವಂತರ ಸಂಖ್ಯೆ ತುಂಬಾ ಕಡಿಮೆ. ಹೀಗಾಗಿ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವರು. ಇವರ ಬದುಕಿನ ಬಗ್ಗೆ ಸ್ಥಿತಿಗತಿಯ ಬಗ್ಗೆ ಕೇವಲ ಓದಿ ಅಥವಾ ದೂರದಿಂದ ನೋಡಿ ಹೋಗುವುದಲ್ಲ ಅವರನ್ನು ಹತ್ತಿರದಿಂದ ಅವರ ಭಾಗಿಯಾಗಿ ನೋಡಿದರೆ ಈ ಜನಗಳ ಸ್ಥಿತಿಗತಿ ಅರ್ಥವಾಗುವುದು.

**ಅಡಿಟಿಪ್ಪಣಿಗಳು :**

1. ಶ್ರೀನಿವಾಸ ಎಂ.ಸಿ 2004
2. ಅದೇ
3. ವಿರುಪಾಕ್ಷಿ ಪೂಜಾರಹಳ್ಳಿ, 2006
4. ಈರಗಾರ ಎಸ್.ಡಿ. 2006-43
5. ಅದೇ
6. ವಿರುಪಾಕ್ಷಿ ಪೂಜಾರಹಳ್ಳಿ 2006,18
7. ಪಾಂಡುರಂಗ ಡಿ.ಆರ್. 2000
8. ಅದೇ
9. ಅದೇ
10. ನಾಯಕ ಡಿ.ಬಿ. 181,2000
11. ಅದೇ 182
12. ಅದೇ 187

## ಅಧ್ಯಾಯ-3

## ಬಳ್ಳಾರಿಯ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಗಳ ಪರಿಚಯ

ಸದೃಡ ಸಮಾಜ ರಚನೆಯಾಗಬೇಕಾದರೆ ಸರ್ಕಾರೇತರ ಸಂಘ ಸಂಸ್ಥೆಗಳು, ಪ್ರಜ್ಞಾವಂತ ನಾಗರೀಕರೆಲ್ಲರೂ ಸಕ್ರೀಯವಾಗಿ ಭಾಗವಹಿಸಬೇಕಾಗುತ್ತದೆ. ಮಹಾತ್ಮಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿಗಾಗಿ ಜನಸಾಮಾನ್ಯರ ಮತ್ತು ಸಂಘ ಸಂಸ್ಥೆಗಳ ಪಾತ್ರ ಹಿರಿದಾಗಿತ್ತು. 1950 ರಿಂದ 1970 ರ ವರೆಗೂ ಸಮಾಜ ಕಲ್ಯಾಣಕ್ಕಾಗಿ ಸರ್ಕಾರದ ಅನುದಾನದಿಂದ ಸರ್ಕಾರೇತರ ಸಂಘ ಸಂಸ್ಥೆಗಳಿಗೆ ಜವಾಬ್ದಾರಿ ಕೊಟ್ಟು ಸಮಾಜದ ಉನ್ನತಿಗೆ ಸಹಭಾಗಿತ್ವವನ್ನು ಅನುದಾನಗಳೊಂದಿಗೆ, ಕೊಡಲಾಯಿತು. 1990 ರ ನಂತರ ಸ್ವಯಂ ಸೇವಾ ಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿ ರೂಪುಗೊಂಡು ಸಣ್ಣ ಉಳಿತಾಯ. ಸಾಲಯೋಜನೆಗಳು ಮುಂತಾದವುಗಳೊಂದಿಗೆ ಸರ್ಕಾರದ ಯೋಜನೆಗಳನ್ನು ರೂಪಿಸುವುದರಲ್ಲಿ ಭಾಗವಹಿಸಲು ಅವಕಾಶಗಳನ್ನು ಕೊಡಲಾಯಿತು. ಕರ್ನಾಟಕ ರಾಜ್ಯದಲ್ಲಿ 500 ರಿಂದ 600 ಸ್ವಯಂ ಸೇವಾ ಸಂಸ್ಥೆಗಳು ನೊಂದಾಯಿತವಾಗಿದ್ದು, ಜನಸಾಮಾನ್ಯರಿಗೆ ಸರ್ಕಾರದ ಸವಲತ್ತುಗಳನ್ನು ತಲುಪಿಸುವದರಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳು ಉತ್ತಮ ಕೆಲಸ ಮಾಡುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ವತಿಯಿಂದ ಕರ್ನಾಟಕ ರಾಜ್ಯದ್ಯಾಂತ 500 ಕ್ಕೂ ಹೆಚ್ಚು ಸರ್ಕಾರೇತರ ಸಂಘ ಸಂಸ್ಥೆಗಳು ಇಲಾಖೆಯ ಕಾರ್ಯಗಳನ್ನು ಅನುಷ್ಠಾನಗೊಳಿಸುತ್ತಿವೆ. ನಿರ್ಗತಿಕ ಮಕ್ಕಳ ಕುಟೀರಗಳು, ಶಿಶುಪಾಲನಾ ಕೇಂದ್ರಗಳು, ಸಾಂತ್ವಾನ ಕೇಂದ್ರಗಳು ಸ್ವಾಧಾರ ಕೇಂದ್ರಗಳು ( ಅರ್ಹ ವ್ಯಕ್ತಿ ಸಂಸ್ಥೆಗಳು) ಮಕ್ಕಳನ್ನು ದತ್ತು ಕೊಡುವ ಕೇಂದ್ರಗಳು, ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರ ಸಂರಕ್ಷಣಾ ಕಾಯ್ದೆಯಡಿ ಸೇವಾ ಸಂಸ್ಥೆಗಳು ಬಾಲಕೀಯರ ವಸತಿ ನಿಲಯಗಳು ಇಂತಹ ಹಲವಾರು ಕೇಂದ್ರಗಳನ್ನು ಸರ್ಕಾರೇತರ ಸಂಘಸಂಸ್ಥೆಗಳು ನಡೆಸುತ್ತವೆ. ಸರ್ಕಾರದ ಸಹಾರ ಸವಲತ್ತುಗಳು ತಲುಪವಲ್ಲಿ ಉತ್ತಮ ಸೇತುವೆಯಾಗಿ ಎನ್.ಜಿ.ಓ ಗಳು ಕಾರ್ಯ ನಿರ್ವಹಿಸುತ್ತವೆ. ಸಂಘಗಳ ನೊಂದಣಿ ಕಾಯ್ದೆ 1960 ರ ಅನ್ವಯ ಪ್ರತಿ ಜಿಲ್ಲೆಯಲ್ಲಿ ನೋಂದಣಿ ಕಛೇರಿಯಲ್ಲಿ ನೋಂದಾಯಿಸಬೇಕು ಸಂಘದ ಬೈಲಾ ಸಂಘದ ಸಂಸ್ಥೆಯ ಉದ್ದೇಶಗಳನ್ನು ತಿಳಿಸಬೇಕು. ಸರ್ಕಾರೇತರ ಸಂಘ ಸಂಸ್ಥೆಗಳು ಸರ್ಕಾರದೊಂದಿಗೆ ನೋಂದಣಿ ಮಾಡುವುದು ಉತ್ತಮ.

- ಸರ್ಕಾರದ ಯೋಜನೆಗಳನ್ನು ಜನರಿಗೆ ತಲುಪಿಸುವಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳು. ಸಂಪರ್ಕ ಸೇತುವೆಗಳಾಗಿರುವುದರಿಂದ ಜನರಿಗೆ ವಿಷಯಗಳು ಬೇಗ ತಲುಪುತ್ತವೆ.
- ಸರ್ಕಾರೇತರ ಸಂಘ ಸಂಸ್ಥೆಗಳು ಹಳ್ಳಿ, ತಾಲ್ಲೂಕು ಮಟ್ಟದಲ್ಲಿ ಸೇವೆ ಸಲ್ಲಿಸುವುದರಿಂದ ನಿಜವಾಗಿ ತಲುಪಬೇಕಾದವರಿಗೆ ಸರ್ಕಾರದ ಸಹಾಯ ಸವಲತ್ತುಗಳು ತಲುಪುತ್ತವೆ.
- ಇನ್ನೂ ಮುಂದಿನ ದಿನಗಳಲ್ಲಿ ಸರ್ಕಾರದ ಯೋಜನೆಗಳೆಲ್ಲವೂ ಸರ್ಕಾರೇತರ ಸಂಘ ಸಂಸ್ಥೆಗಳ ಮೂಲಕವೇ ಜನರಿಗೆ ತಲುಪಬೇಕಾಗುತ್ತದೆ.
- ಜನರಿಗೆ ಜನರಿಂದ ಜನರೇ ಜಾಗೃತವಾಗಿ ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವಲ್ಲಿ ಈ

ವಿಧಾನ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ.

 ಪ್ರಪಂಚದಾದ್ಯಂತ ಜಾಗತೀಕರಣದತ್ತ ದಾಮುಗಾಲು ಹಾಕುತ್ತಿರುವ ಸಂದರ್ಭದಲ್ಲಿ ಪ್ರಪಂಚವೇ ಒಂದು ಹಳ್ಳಿಯಾಗಿ ಮಾರ್ಪಟ್ಟಿರುವ ಈ ಸಂದರ್ಭದಲ್ಲಿ ತಾಂತ್ರಿಕ ವಿಧಾನಗಳ ಬಳಕೆ ಕಡು ಬಡವರಿಗೂ ಸಾಧ್ಯವಾಗಬೇಕು. ಇದರಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ ಅತ್ಯಂತ ಮಹತ್ತರವಾದದ್ದು. ಇನ್ನೊಂದು ಮುಖ್ಯ ವಿಷಯವೆಂದರೆ ಕೆಲವು ಸಂಘ ಸಂಸ್ಥೆಗಳು ಸರ್ಕಾರದ ಅನುದಾನ ಪಡೆದ ಸಾಮಾನ್ಯ ಜನರಿಗೆ ಸವಲತ್ತುಗಳನ್ನು ತಲುಪಿಸುವುದರಲ್ಲಿ ವಿಫಲವಾಗಿವೆ. ತಮ್ಮ ಖಜಾನೆಯನ್ನು ಭರ್ತಿಮಾಡಿಕೊಳ್ಳುತ್ತಾ ಜನರನ್ನು ಮತ್ತು ಸರ್ಕಾರವನ್ನು ವಂಚಿಸುವುದರಲ್ಲಿ ಇವು ನಿರತವಾಗಿವೆ. ಎಂಬ ವಿಚಾರವು ಇಂದು ಜನಸಾಮಾನ್ಯರಲ್ಲಿ ಚರ್ಚಿತವಾಗುತ್ತಿದೆ.

ಭಾರತದ ಅರ್ಥವ್ಯವಸ್ಥೆಯ ಕೇಂದ್ರ ಬಿಂದು ಗ್ರಾಮೀಣ ಪ್ರದೇಶ. ಗ್ರಾಮೀಣ ಜನರಿಗೆ .ಮೂಲಭೂತ ಅವಶ್ಯಕತೆಗಳ ಪೂರೈಕೆಗೆ, ಸರ್ಕಾರದ ಸವಲತ್ತುಗಳನ್ನು ಜನರಿಗೆ ಮುಟ್ಟಿಸುವ ನಿಟ್ಟಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಬೇಕು. ಸಾಮಾನ್ಯವಾಗಿ ಸಮಾನ ಸಾಮಾಜಿಕ  ಆರ್ಥಿಕ ಹಿನ್ನಲೆಯುಳ್ಳ ಏಳು ಜನ ಸದಸ್ಯರನ್ನೊಳಗೊಂಡ ಒಂದು ಗುಂಪನ್ನು ಸಂಸ್ಥೆಯ ಬೋರ್ಡ್ ಎಂದು ಕರೆಯಲಾಗುತ್ತದೆ ಈ ಗುಂಪು ಅಥವಾ ಬೋರ್ಡ್ ತನ್ನದೇ ಆದ ಧ್ಯೇಯೋದ್ದೇಶಗಳನ್ನು ಹೊಂದಿರುತ್ತದೆ. ಎಲ್ಲಾ ಸದಸ್ಯರು ತಾವು ಗಳಿಸುವ ಆದಾಯದಲ್ಲಿ ಸಂಸ್ಥೆಯ ಏಳಿಗೆಗೆ ಹಾಗೂ ಸಮಾಜ ಅಭಿವೃದ್ಧಿಗೆ ಹಾಕಬೇಕು. ಗ್ರಾಮೀಣ ಪ್ರದೇಶದ ಅಥವಾ ನಗರ ಪ್ರದೇಶದ ಜನರನ್ನು ಒಟ್ಟು ಗೂಡಿಸಿ ತಮ್ಮ ಆರ್ಥಿಕ, ಸಾಮಾಜಿಕ ಅಭಿವೃದ್ಧಿಗೆ ಒಂದು ಗೂಡಿಸಬೇಕು.

<u>ಸಂಸ್ಥೆಯ ಉದ್ದೇಶ:</u>

 ಸಂಸ್ಥೆಯ ಆಯ್ಕೆ ಮಾಡಿಕೊಮಡ ಪ್ರದೇಶದ ಅಭಿವೃದ್ಧಿ ಅಂದರೆ ಹಿಂದುಳಿದವರು. ಅಲ್ಪ ಸಂಖ್ಯಾತರ ಪರಿಶಿಷ್ಠ ಜಾತಿ, ಪಂಗಡದವರ ಅಭಿವೃದ್ಧಿ, ಮಹಿಳೆಯರ ಅಭಿವೃದ್ಧಿ ವಯಸ್ಕರ ಅಭಿವೃದ್ಧಿ ಮಕ್ಕಳ ಅಭಿವೃದ್ಧಿ ಆರೋಗ್ಯ ಮತ್ತು ಶಿಕ್ಷಣದ ಅಭಿವೃದ್ಧಿ ಹಾಗೂ ಸರ್ವಾಂಗೀಣ ಅಭಿವೃದ್ಧಿಯ ಉದ್ದೇಶವನ್ನು ಈ ಸ್ವಯಂ ಸೇವಾ ಸಂಸ್ಥೆಗಳು ಇಟ್ಟುಕೊಂಡಿರುತ್ತವೆ.

 ತಮ್ಮ ವ್ಯಾಪ್ತಿಯಲ್ಲಿ ಬರುವ ಬಡ ಜನರಿಗೆ ಪರೋಕ್ಷವಾಗಿ ಬ್ಯಾಂಕ್ ಹಾಗೂ ಇನ್ನಿತರ ಹಣಕಾಸಿನ ಸಂಸ್ಥೆಗಳ ಮೂಲಗಳಿಂದ ಸಾಲ ಪಡೆಯಲು ಅನುಕೂಲ ಮಾಡಿಕೊಡುವುದು.

 ಹಳ್ಳಿಗಳಲ್ಲಿ ಸ್ವ-ಸಹಾಯ ಸಂಘಗಳನ್ನು ರಚಿಸುವುದು ಮಹಿಳಾ ಸ್ವ ಸಹಾಯ ಸಂಘ ಹಾಗೂ ಪುರುಷ ಸ್ವ ಸಹಾಯ ಸಂಘ ಮತ್ತು ಯುವಕ ಗುಂಪುಗಳು.

 ಸದಸ್ಯರಲ್ಲಿ ಹಾಗೂ ಹಳ್ಳಿಗಳಲ್ಲಿ ಅಥವಾ ತಮ್ಮ ವ್ಯಾಪ್ತಿಯಲ್ಲಿ ಪ್ರದೇಶದಲ್ಲಿ ಆ ಪ್ರದೇಶದಲ್ಲಿ ಅಭಿವೃದ್ಧಿಯ ಬಗ್ಗೆ ಅರಿವು ಮೂಡಿಸುವುದು.

 ಸರ್ಕಾರ ಅನುಷ್ಠಾನ ಗೊಳಿಸುವ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹಳ್ಳಿಯ ಜನರನ್ನು

ತೊಡಗಿಸುವಂತೆ ಮಾಡುವುದು.

- ತಮ್ಮ ಸಮಸ್ಯೆಗಳನ್ನು ಗುರುತಿಸಿ ತಾವೇ ಹಂತ ಹಂತವಾಗಿ ಪರಿಹರಿಸಿ ಸಾಮರ್ಥ್ಯವನ್ನು ಹಳ್ಳಿಗಳಲ್ಲಿ ತರಬೇತಿಯ ಮೂಲಕ ಬೆಳೆಸಬೇಕು ಮತ್ತು ಅವರಲ್ಲಿ ನಾಯಕತ್ವದ ಗುಣವನ್ನು ಬೆಳೆಸಬೇಕು.
- ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಳ್ಳುವಂತೆ ಅವರಿಗೆ ತರಬೇತಿಯನ್ನು ಒದಗಿಸಬೇಕು.
- ಅವರು ಆರ್ಥಿಕ ಹಾಗೂ ಸಾಮಾಜಿಕವಾಗಿ ಮುಂದುವರೆಯಲು ಗುಡಿ ಕೈಗಾರಿಕೆಗಳಿಗೆ ತರಬೇತಿ ಕೊಟ್ಟು ಸ್ವಲ್ಪ ಮಟ್ಟಿನ ಧನಸಹಾಯ ಮಾಡಬೇಕು ಮತ್ತು ತಯಾರಿಸಿದ ಸಾಮಾಗ್ರಿಗಳಿಗೆ ಸೂಕ್ತ ಮಾರುಕಟ್ಟೆಯ ವ್ಯವಸ್ಥೆ ಮಾಡಬೇಕು.
- ಸಂಘಟನಾ ಸಾಮರ್ಥ್ಯ ಬೆಳೆಸಿ ಸಮಸ್ಯೆಯ ವಿರುದ್ಧ ಹೋರಾಡುವಂತೆ ಮಾಡಬೇಕು.
- ಪರೋಕ್ಷವಾಗಿ ಸಾಂಸ್ಥಿಕ ಹಣಕಾಸಿನ ಮೂಲಗಳಿಂದ ಸಾಲ ಪಡೆಯಲಿಕ್ಕೆ ಅನುಕೂಲ ಮಾಡಿಕೊಡುವುದು.
- ತಾರತಮ್ಯ ತೊಡೆದು ಹಾಕುವಲ್ಲಿ ವಿಶೇಷವಾಗಿ ಕಡೆಗಣಿತ ಗುಂಪುಗಳ ಮಾನವ ಹಕ್ಕುಗಳನ್ನು ರಕ್ಷಿಸಲು ಪ್ರೇರಿಪಿಸಬೇಕು.
- ಸಮಾಜದ ಉದ್ಧಾರಕ್ಕಾಗಿ ತಾವು ಹಾಕಿಕೊಂಡಂತಹ ಕಾರ್ಯಕ್ರಮಗಳನ್ನು ಕಾರ್ಯ ರೂಪಕ್ಕೆ ತರುವುದು.
- ಸಂಸ್ಥೆಗಯ ಸೇವೆಗಳು ಫಲಿತಾಂಶ ಆಧರಿತವಾಗಿದ್ದು, ವೃತ್ತಿಪರವಾಗಿ ನಡೆಸುವ ಪಾಲುಗಾರಿಕೆ ನಿರ್ದೇಶನ ಆಧರಿತವಾದುದ್ದಾಗಿದೆ.
- ಸಿಬ್ಬಂಧಿ ಮತ್ತು ಸಹಜವಾಗಿ ಸಂಸ್ಥೆಗಳ ಸಹಕಾರ ಸೇವಾ ಸೌಲಬ್ಯ ಪಡೆಯಲು ಅಧಿಕಾರ ಹಂಚಿಕೆ ಮತ್ತು ವಿಭಜಿತ ತೀರ್ಮಾನ ತೆಗೆದುಕೊಳ್ಳುವಲ್ಲಿ ಪ್ರಜಾಸತ್ತಾತ್ಮಕ ನೀತಿಯನ್ನು ಸಂಸ್ಥೆ ಅನುಸರಿಸುವುದು.
- ಸಂಯೋಜನೆಯ ಮೂಲಕ ನೇರ ನೀತಿ, ನಾಯಕತ್ವ ಕಲಿಕೆಯ ಹರಡುವಿಕೆ. ಅರಿವು ಮೂಡಿಸುವುದು ನಡುವಳಿಕೆಯ ಬದಲಾವಣೆ ಮಾಡುವುದು ಮತ್ತು ಹಣಕಾಸಿನ ತಂತ್ರಗಳನ್ನು ರೂಪಿಸುವುದು.
- ಕಿರುಸಾಲ ಕಾರ್ಯಕ್ರಮ ಆದಾಯ ಉತ್ಪತ್ತಿ ಕಾರ್ಯಕ್ರಮ ಮತ್ತು ಆರ್ಥಿಕ ಹಾಗೂ ಸಾಮಾಜಿಕ ಭದ್ರತಾ ಯೋಜನೆಗಳನ್ನು ರೂಪಿಸಲು ವಿವಿಧ ಸಂಘಗಳು ಮತ್ತು ಬ್ಯಾಂಕ್‌ಗಳಿಂದ ಸ್ಥಳೀಯರಿಗೆ ಹಣಕಾಸು ವ್ಯವಸ್ಥೆ.

ಕರ್ನಾಟಕದ ರಾಜ್ಯದಲ್ಲಿ ಕಾರ್ಯನಿರತವಾಗಿರು ಸ್ವಯಂ ಸೇವಾ ಸಂಸ್ಥೆಗಳು ಪಿಟ ಎಂಬುದರ ಬಗೆಗೆ ನಿಖರವಾದ ಮಾಹಿತಿಯಿಲ್ಲ. ಅನೇಕ ನೋಂದಾಯಿತ ಸಂಸ್ಥೆಗಳಿದ್ದರೂ ಸಹ ಸ್ವಂತ ಅನುಕೂಲಕ್ಕಾಗಿ ಮಾತ್ರ ಕಾರ್ಯ ನಿರ್ವಹಿಸುತ್ತಿವೆ ಎಂಬ ಕಾರಣಕ್ಕಾಗಿ ಅವುಗಳನ್ನು ಗಂಭೀರವಾಗಿ ಪರಿಗಣಿಸಲು ಯಾವಗಲೋ ಒಮ್ಮೆ ಮಾಡುವ ಸಂದರ್ಭಗಳೇ ಹೆಚ್ಚು ಸ್ವಯಂ ಸೇವ ಸಂಸ್ಥೆಗಳು ಸಾಮಾನ್ಯವಾಗಿ ಒಬ್ಬ

ವ್ಯಕ್ತಿ ಅಥವಾ ಸಮಾನ ಮನಸ್ಕರಿಂದ ಕೂಡಿದ ಸಣ್ಣ ಗುಂಪಿನಿಂದ ಪ್ರಾರಂಭವಾಗುತ್ತವೆ. ಸ್ಥಳ ಮತ್ತು ಅಲ್ಲಿನ ಸಮಸ್ಯೆಯ ಆಯ್ಕೆಯು ಆ ಸಂಸ್ಥೆಯದ್ದೇ ಆಗಿರುತ್ತದೆ. ನಗರ ಪ್ರದೇಶಗಳಲ್ಲಿ ಕೆಲಸ ಮಾಡುವ ಸ್ವಯಂ ಸೇವಾ.

ಸಂಸ್ಥೆಗಳಿಗೂ ಮತ್ತು ಹಳ್ಳಿ ಅಥವಾ ಗ್ರಾಮೀಣ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುವ ಸ್ವಯಂ ಸೇವಾ ಸಂಸ್ಥೆಗಳಿಗೂ ಕೆಲವುಗಳಲ್ಲಿ ಸಾಮ್ಯತೆ ಇನ್ನೂ ಕೆಲವುಗಳಲ್ಲಿ ಭಿನ್ನತ ಇದೆ. ನಗರ ಪ್ರದೇಶಗಳಲ್ಲಿ ಕೆಲಸ ಮಾಡುವವರು ಬಡವರು ಕೊಳಗೇರಿಗಳು. ಮನೆಗೆಲಸದವರು. ಕುಡಿತ ಲೈಂಗಿಕ ಅಪರಾದಗಳು, ಅಪರಾಧಗಳು ಪರಿಸರ ಮುಂತಾದ ಸಮಸ್ಯೆಗಳನ್ನು ಕುರಿತು ಕೆಲಸ ಮಾಡುತ್ತವೆ ಮತ್ತು ಮಾನವ ಹಕ್ಕುಗಳು ಗ್ರಾಹಕರ ಸಮಸ್ಯೆಗಳು ಹಾಗೂ ಶಿಕ್ಷಣದ ಕಡೆಗೂ ಆ ಸಂಸ್ಥೆಗಳು ಗಮನ ಹರಿಸುತ್ತವೆ.

ಗ್ರಾಮಾಂತರ ಅಥವಾ ಹಳ್ಳಿ ವಲಯಗಳಲ್ಲಿ ಸಂಸ್ಥೆಗಳು ಗ್ರಾಮೀಣಾಭಿವೃದ್ಧಿ ಶಿಕ್ಷಣ, ಆರೋಗ್ಯ ಕುಡಿಯುವ ನೀರು, ಇತ್ತೀಚೆಗೆ ಪರಿಸರದ ಅಂಶಗಳು, ದುರ್ಬಲ ವರ್ಗಗಳ ಶೋಷಣೆ. ಭೂಮಿಗೆ ಸಂಬಂಧಿಸಿದ ಪ್ರಕರಣಗಳು, ಜಾತಿ ಹಾಗೂ ಧಾರ್ಮಿಕ, ಅಲ್ಪಸಂಖ್ಯಾತರ ಸಮಸ್ಯೆಗಳು ಮಹಿಳೆಯರ ಸ್ಥಾನ ಮಾನ ಹಾಗೂ ಪಾತ್ರದ ಬಗ್ಗೆ ಗಮನವನ್ನು ಕೇಂದ್ರಿಕರಿಸುತ್ತವೆ. ಕುಡಿತವು ಎಲ್ಲಾ ಕಡೆಯ ಒಂದು ದೊಡ್ಡ ಸಮಸ್ಯೆಯಾಗಿದ್ದೂ ಇದರಿಂದ ಗಂಡ ಹೆಂಡಿರ ಜಗಳ ಉಲ್ಬಗೊಂಡು ಬಾಲ ಕಾರ್ಮಿಕ ಸಮಸ್ಯೆಗೆ ಎಡೆಮಾಡಿಕೊಡುತ್ತದೆ.

ಸರ್ಕಾರೇತರ ಸಂಸ್ಥೆಗಳು ಸ್ವಯಂ ಸೇವಾ ಸಂಸ್ಥೆಗಳಾಗಿರುವುದರಿಂದ ಸರ್ಕಾರಿ ಉದ್ಯೋಗಿಗಳಿಗೆ ಅನ್ಯಯವಾಗುವಂತೆ ಆಚಾರ ಸಂಹಿತೆ ಅವರಿಗೆ ಅನ್ವಯವಾಗುವುದಿಲ್ಲ. ಆದರೆ ಯಾವುದೇ ಸ್ವಯಂ ಸೇವಾ ಸಂಸ್ಥೆಯ ಚಟುವಟಿಕೆಗಳನ್ನು ಕಾಲದಿಂದ ಕಾಲಕ್ಕೆ ಮೌಲ್ಯ ಮಾಪನ ಮಾಡಬೇಕಾದ ಅಗತ್ಯವಿರುತ್ತದೆ. ದಾನಿಗಳಿಂದ ಸಹಾಯ ಪಡೆಯುವುದರ ಜೊತೆಗೆ ವಿದೇಶಿಮೂಲಗಳಿಂದ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಸಹಾಯ ಪಡೆಯುವಂತಹ ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರ ಹಾಗೂ ಸಾರ್ವಜನಿಕರಿಗೆ ಲೆಕ್ಕ ಕೊಡುವಂತಿರಬೇಕು. ಪ್ರಸ್ತುತ ಅನೇಕ ತರಹದ ಸ್ವಯಂ ಸೇವಾ ಸಂಸ್ಥೆಗಳು, ಕಾರ್ಯಪ್ರವೃತ್ತವಾಗಿವೆ. ಇನ್ನೂ ಅನೇಕ ಸಂಸ್ಥೆಗಳು ಸಾರ್ವಜನಿಕರಿಂದ ದೂರವಾಗಿ ಉಳಿದಿವೆ. ಇಂತಹ ಸಂಸ್ಥೆಗಳನ್ನು ಸರ್ಕಾರವೇ ನಿಯಮಗಳಿಗೆ ಒಳಮಾಡಬೇಕು. ಅಥವಾ ಅಂತಹ ಸಂಸ್ಥೆಯನ್ನು ರದ್ದುಮಾಡಬೇಕು. ಆದರೂ ಸ್ವಯಂ ಪ್ರೇರಣೆಯಿಂದ ದುಡಿಯುವವರಾದ್ದರಿಂದ ಯಾವುದೇ ಬಿಗಿ ನಿಯಮಾವಳಿ ಅಥವಾ ನಿರ್ಬಂದಕ್ಕೆ ಒಳಪಟ್ಟವರಾಗಿರುವುದಿಲ್ಲ. ಸರ್ಕಾರವು ತನ್ನ ಕಾರ್ಯಕ್ರಮಗಳನ್ನು ಒಂದು ವಾಹಿನಿಯಲ್ಲಿ ನೆಡೆಸಿ ಹಣಕಾಸಿನ ಸಹಾಯ ನೀಡುವ ಮಟ್ಟಿಗೆ ಸ್ವಯಂ ಸೇವಾ ಸಂಸ್ಥೆಗಳು ಉತ್ತರ ನೀಡಬೇಕಾಗುತ್ತದೆ. ಹಣಕಾಸಿನ ದುರ್ಬಳಕೆಯಾದರೆ ಅದನ್ನು ಕೇಳುವ ಹಕ್ಕು ಸಾರ್ವಜನಿಕರಿಗಿರುತ್ತದೆ. ಜನರ ಜೀವನ ಉತ್ತಮ ಪಡೆಸಲು ಸಹಾಯಕವಾಗುವಂತ ಆರೋಗ್ಯ ಶಿಕ್ಷಣ,

ಆಶ್ರಯದಂತಹ ಕಾರ್ಯಕ್ರಮಗಳಿಗೆ ಹಣ ವಿನಿಯೋಗವಾಗುವುದು ಸಹಜ.

ಭಾರತವು ಸಂಪದ್ಭರಿತ ರಾಷ್ಟ್ರ ಇಲ್ಲಿ ಎತೇಚ್ಛವಾಗಿ ಪ್ರಾಕೃತಿಕ ಸಂಪತ್ತು ಲಭ್ಯವಿದ್ದು ಆರ್ಥಿಕತೆಯಲ್ಲಿ ಮಾತ್ರ ಬಹಳ ಹಿಂದುಳಿದಿದ್ದೇವೆ. ಇಂದು ನಮ್ಮ ಪ್ರದೇಶದಲ್ಲಿ ಶೇ. 20 ರಷ್ಟು ಜನರಿಗೆ ಒಂದೊತ್ತಿನ ಊಟ ದೊರೆಯುತ್ತಿಲ್ಲ. ನಮ್ಮಿಂದ ಸಹಾಯ ಪಡೆದು ಬೃಹದಾಕಾರವಾಗಿ ಬೆಳೆದು ನಿಂತ ಕೆಲವು ರಾಷ್ಟ್ರಗಳು ನಮಗೆ ಸಹಾಯ ಮಾಡುವ ಹಂತದಲ್ಲಿದ್ದಾರೆ ಇದಕ್ಕೆ ಕಾರಣ ನಮ್ಮಲ್ಲಿರುವ ಹೆರಾಜಕತೆ ಮತ್ತು ಸ್ವಯಂ ಪ್ರಜ್ಞೆ ಇಲ್ಲಿ ನೆಲೆನಿಂತಿರುವುದು ಯಾವ ಉದ್ದೇಶಕ್ಕೆಂಬುದನ್ನು ಸಂಪೂರ್ಣವಾಗಿ ಅರಿತುಕೊಂಡರೆ ನಮ್ಮ ರಾಷ್ಟ್ರ ಅಧೋಗತಿಯತ್ತ ಸಾಗುವುದು ನಿಲ್ಲುತ್ತದೆ.

ವಿದೇಶಿಯರ ಪ್ರೇರಣೆಯಿಂದ ಸ್ವಯಂ ಸೇವಾ ಸಂಸ್ಥೆಗಳು ಭಾರತದಲ್ಲಿ ಅಸ್ತಿತ್ವಕ್ಕೆ ಬಂದಿವೆ. ಕೆಲವೊಂದು ಸಂಸ್ಥೆಯ ಕಾರ್ಯನಿಷ್ಠೆಯನ್ನು ನೋಡಿ ಸರ್ಕಾರ ತಾನು ಎಲ್ಲೆಲ್ಲಿ ಕಾರ್ಯ ನಿಭಾಯಿಸಲು ಅಸಾಧ್ಯವೋ ಅಲ್ಲೆಲ್ಲಾ ಸಂಸ್ಥೆಗಳಿಗೆ ಧನ ಸಹಾಯಮಾಡಿ ಕಾರ್ಯ ಮಾಡಲು ಅನುಮತಿ ನೀಡಿತು. ಈ ಧನ ಸಹಾಯ ಪಡೆದ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಕೆಲವು ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸಿದರೆ ಇನ್ನೂ ಕೆಲವು ಕೊಟ್ಟಂತಹ ಹಣವನ್ನು ದುರುಪಯೋಗ ಮಾಡಿಕೊಂಡಿರುವ ಉದಾಹರಣೆಗಳನ್ನು ಕಾಣಬಹುದಾಗಿದೆ.

ಅದೇ ರೀತಿಯಾಗಿ ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು 80 ಸ್ವಯಂ ಸೇವಾ ಸಂಸ್ಥೆಗಳಿವೆ ಇವುಗಳ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ವಿದೇಶಿ ಏಜೆನ್ಸಿಗಳಿಂದ ಹಣ ದೊರೆಯುತ್ತದೆ. ಈ ಸಂಸ್ಥೆಗಳು ಬುಡಕಟ್ಟು ಅಭಿವೃದ್ಧಿ, ಸಾಮಾಜಿಕ ಹಾಗೂ ಗ್ರಾಮೀಣಾಭಿವೃದ್ಧಿ, ಶಿಕ್ಷಣ, ಆರೋಗ್ಯ ಮುಂತಾದ ಇನ್ನೂ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಯಾವ ರೀತಿ ಮಾಡಿದ್ದಾರೆಂದು ತಿಳಿದುಕೊಳ್ಳುವುದು ಸಾಧ್ಯವಿದೆ.

ಸ್ವಯಂ ಸೇವಾ ಸಂಸ್ಥೆ ಕೆಲವೊಂದು ಧೋರಣೆಗಳನ್ನು ಹೊಂದಿ ಪ್ರಾರಂಭವಾಗುತ್ತವೆ. ಅವುಗಳಲ್ಲಿ ಮೂರು ವಿಧಗಳನ್ನು ಕಾಣಬಹುದಾಗಿದೆ. ಪ್ರಥಮವಾಗಿ ಹೇಳಬೇಕಾದರೆ ವೃತ್ತಿಪರವಾಗಿ ಸಮಾಜ ಕಾರ್ಯವನ್ನು ಅಭ್ಯಾಸ ಮಾಡಿದವರು ಅವರ ಸ್ವಯಂ ಉದ್ಯೋಗದ ಸಲುವಾಗಿ ಅದರಿಂದ ಕೆಲವರಿಗೆ ಉದ್ಯೋಗ ದೊರಕುತ್ತದೆಂದು ಮತ್ತು ತಕ್ಕಮಟ್ಟಿನ ಸಮಾಜಸೇವೆಯಲ್ಲಿ ಸಮಾಜ ಕಾರ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಘ ಸಂಸ್ಥೆಗಳನ್ನು ಪ್ರಾರಂಭಿಸುತ್ತಾರೆ. ಇದರಲ್ಲಿ ಯಾವುದೇ ರೀತಿಯ ಅತಿರೇಕದ ಸರ್ಕಾರಕ್ಕೆ ಮತ್ತು ಸಮಾಜಕ್ಕೂ ಮೋಸ ಮಾಡುವ ಉದ್ದೇಶ ಹೊಂದಿರುವುದಿಲ್ಲ.

ಆ ನಂತರ ಇನ್ನೊಂದು ಹಂತದ ಸಂಸ್ಥೆಗಳನ್ನು ನೋಡುವುದಾದರೆ, ಇಲ್ಲಿ ಸಂಸ್ಥೆಗಳಿಗಿಂತ ಸೇವೆಯೇ ಮುಖ್ಯಪಾತ್ರ ವಹಿಸುತ್ತದೆ. ಉದಾಹರಣೆ ಅಣ್ಣಾ ಹಜಾರೆ. ಬಾಬಾ ಆಮ್ಟೆ, ಮೇದಾ ಪಾಟ್ಕರ್ ಇವರು ಸಮಾಜ ಸುಧಾರಕರಾಗಿ ಹೊರಹೊಮ್ಮುತ್ತಾರೆ. ಇವರು ಯಾವುದೇ ಫಲಾಪೇಕ್ಷೆಯನ್ನು ಬೇಡದೇ ಸಮಾಜ ಒಳಿತಿಗಾಗಿ, ಸಮಾಜದ ಕೆಳವರ್ಗದವರಿಗೆ ಮತ್ತು ನಿಗೃತಿಕರಿಗೆ ಅನ್ಯಾಯವಾದರೆ ಅನ್ಯಾಯ

ಮಾಡಿದವರ ವಿರುದ್ಧ ಧ್ವನಿ ಎತ್ತುತ್ತಾರೆ ಮತ್ತು ಆದರ ವಿರುದ್ಧ ಕಠಿಣವಾಗಿ ಹೋರಾಡುತ್ತಾರೆ.

ಮತ್ತೊಂದು ವರ್ಗದ ಸಂಸ್ಥೆಗಳೆಂದರೆ ಅದರ ಉದ್ದೇಶ ಮೊದಲಿಗೆ ಸಮಾಜ ಸೇವೆ ಎಂದು ಬಂದು ತಮ್ಮ ವೃತ್ತಿಯನ್ನು ಆಧರಿಸಿ ಸಮುದಾಯಗಳಲ್ಲಿ ಕೆಲಸ ಮಾಡುತ್ತಾ ಅಲ್ಲಿನ ಸಂಪತ್ತನ್ನು ಕೊಳ್ಳೆಯೊಡೆದು ಹಣಗಳಿಕೆಯಲ್ಲಿ ಮತ್ತು ತಮ್ಮ ಸಂಸ್ಥೆಯ ಹೆಸರನ್ನು ಉನ್ನತ ಮಟ್ಟದಲ್ಲಿರಿಸಬೇಕೆಂದು ಪರಿಶ್ರಮಪಡುತ್ತಾರೆ. ಆದರೆ ಮೊದಲಿಗೆ ಅಂದುಕೊಂಡ ಬಂದ ಸಮಾಜಸೇವೆಯನ್ನು ಗಾಳಿಗೆ ತೂರಿ ತಮ್ಮ ಅಭಿವೃದ್ಧಿಗಾಗಿ ಅಲ್ಲಿನ ಸಮುದಾಯಗಳನ್ನು ಮತ್ತು ಕೆಳವರ್ಗದ ಜನರನ್ನು ಬಳಸಿಕೊಳ್ಳುತ್ತಾರೆ. ಈ ರೀತಿಯ ಅವ್ಯವಹಾರಗಳನ್ನು ನಡೆಸುತ್ತಿರುವುದು. ನನ್ನ ಕ್ಷೇತ್ರ ಕಾರ್ಯದಲ್ಲಿ ಸಮುದಾಯದವರ ಕಡೆಯಿಂದ ತಿಳಿದು ಬಂದಿದೆ. ಇಂತಹ ಅವ್ಯವಹಾರಗಳು ದಕ್ಷಿಣ ಕರ್ನಾಟಕ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕೆಲವೊಂದು ಕಾರಣಗಳಿಂದ ಸಂಸ್ಥೆಯ ಹೆಸರುಗಳನ್ನು ಇಲ್ಲಿ ನೊಂದಾಯಿಸುವಂತಿಲ್ಲ.

ಈ ಮೇಲಿನ ಮೂರು ಧೋರಣೆಗಳನ್ನು ಹೊತ್ತು ಸ್ವಯಂ ಸೇವಾ ಸಂಸ್ಥೆಗಳು ಪ್ರಾರಂಭವಾಗುತ್ತದೆ. ನಮ್ಮ ಕರ್ನಾಟಕದ ರಾಜ್ಯದಲ್ಲಿ ಸುಮಾರು 500 ರಿಂದ 600 ಸ್ವಯಂ ಸೇವಾ ಸಂಸ್ಥೆಗಳಿದ್ದು, ಕೇವಲ ಅರ್ಧದಷ್ಟು ಸ್ವಯಂ ಸೇವಾ ಸಂಸ್ಥೆಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿವೆ.

ಬುಡಕಟ್ಟು ಸಮುದಾಯದ ಮೇಲ್ವಿಚಾರಣೆಯ ಸಂಸ್ಥೆಗಳು:-

ಈ ಸಂಸ್ಥೆಯು ಬಳ್ಳಾರಿಯ ಸುತ್ತಮುತ್ತಲಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇದು ಬಳ್ಳಾರಿ ಜಿಲ್ಲೆಯ ನೋಂದಾವಣೆ ಕಛೇರಿಯಲ್ಲಿ ನೋಂದಣೆಯಾಗಿದ್ದು, ಇದು ಮುಖ್ಯವಾಗಿ ಬುಡಕಟ್ಟು ವರ್ಗದವರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ ಮತ್ತು ಶೈಕ್ಷಣಿಕ ಅಭಿವೃದ್ಧಿಯ ಸಲುವಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ.

ಬುಡಕಟ್ಟು ಅಭಿವೃದ್ಧಿಯ ಸಲುವಾಗಿ ಮತ್ತು ಬುಡಕಟ್ಟು ಜನರ ಮತ್ತು ಅವರ ಪೀಳಿಗೆಯ ಶ್ರೇಯೋಭಿವೃದ್ಧಿಗೆ ಕೆಲವು ಪ್ರಗತಿ ಪರಕಾರ್ಯಗಳನ್ನು ಕೈಗೊಂಡಿದೆ. ಶಿಕ್ಷಣ ಕೊಡುವ ಉದ್ದೇಶದಿಂದ ಮಕ್ಕಳಿಗೆ ಖಾಸಗಿ ಶಿಶು ಉಪಾರಗಳನ್ನು ತೆರೆದಿರುವುದು. ವಯಸ್ಕರಿಗೆ ಮತ್ತು ಹೆಣ್ಣುಮಕ್ಕಳಿಗೆ ರಾತ್ರಿ ಶಾಲೆ ನಡೆಸುವುದು. ಸರಕಾರದ ಯೋಜನೆಗಳಾದ ಕಲಿಯೋಣ ಭಾರವವ ಮತ್ತು ಸೇತುಬಂದ ಶಾಲೆಯನ್ನು ಬುಡಕಟ್ಟು ಮಕ್ಕಳಿಗೆ ಸಂಸ್ಥೆ ಈ ರೀತಿಯ ಶೈಕ್ಷಣಿಕ ಕಾರ್ಯಗಳನ್ನು ಮಾಡುತ್ತದೆ.

ಅನಂತರ ಆರ್ಥಿಕ ಅಭಿವೃದ್ಧಿಯ ಸಲುವಾಗಿ ಬುಡಕಟ್ಟು ವರ್ಗದ ಜನರನ್ನು ಅವರ ವೃತ್ತಿ ಕೌಶಲ್ಯದ ಆಧಾರದ ಮೇಲೆ ತರಬೇತಿಯನ್ನು ಕೊಡುವುದು. ಮತ್ತು ಅವರ ಉತ್ಪನ್ನಗಳನ್ನು ಮಾರಾಟ ಮಾಡಲಿಕ್ಕೆ ಮಾರ್ಕೆಟ್ ಸೌಲಭ್ಯ ಕಲ್ಪಿಸಿ ಕೊಡುವುದು ಮತ್ತು ಮಹಿಳೆಯರನ್ನು ಒಗ್ಗೂಡಿಸಿ ಸ್ವ ಸಹಾಯ ಸಂಘಗಳನ್ನು ರಚಿಸುವುದು ಆರ್ಥಿಕ ಬಲವರ್ದನೆಗೋಸ್ಕರ ಆ ಸಂಘಗಳಿಗೆ ಧನ ಸಹಾಯವನ್ನು ನೀಡಿ ಅವರ ಅವರ ಬಲವರ್ಧನೆಗೋಸ್ಕರ ಶ್ರಮಿಸುತ್ತಿದೆ. ಬಳಿಕ ಬುಡಕಟ್ಟು ವರ್ಗದ ಮಹಿಳೆಯರು ಮತ್ತು ಪುರುಷರು ಮುಖ್ಯವಾಹಿನಿಗೆ ಬರುವ ಸಲುವಾಗಿ ಕೆಲವೊಂದು. ಬ್ಯಾಂಕುಗಳ ಸರ್ಕಾರಿ ಸಂಸ್ಥೆಗಳ ಮತ್ತು ಇನ್ನಿತರ ವಿಭಾಗಗಳ ಸಂಪರ್ಕವನ್ನು ಸಂಸ್ಥೆಯವರು ಬೆಳೆಸುತ್ತಾರೆ.

ಸರ್ಕಾರ ಇದಲ್ಲವನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಶಿಕ್ಷಣದಲ್ಲಿ ಉದ್ಯೋಗದಲ್ಲಿ, ರಾಜಕೀಯದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿಯೇ ಮೀಸಲಾತಿಯನ್ನು ಕೊಟ್ಟು ಅವರ ಏಳಿಗೆಗೆ ದುಡಿಯುತ್ತಿದೆ. ಜೊತೆ ಜೊತೆಯಲ್ಲಿ ತಾನು ನಿಭಾಯಿಸಲಾಗದೆ ಸ್ಥಳಗಳಲ್ಲಿ ಸ್ವಯಂ ಸಂಘಗಳ ಮೂಲಕ ಕಾಯರೆ ಮಾಡುವಲ್ಲಿ ಯಶಸ್ವಿಯಾಗಿದೆ. ಇಂತಹ ನಿಟ್ಟಿನಲ್ಲಿ ಬುಡಕಟ್ಟಿಟ್ಟ ಅಭಿವೃದ್ಧಿ ಸಂಸ್ಥೆಯು ಕೂಡ ಇದರ ಏಳಿಗೆಗೆ ಶ್ರಮಿಸುತ್ತಿದೆ.

- **ದಲಿತ ಮಹಾಸಭಾ:**

ಈ ದಲಿತ ಮಹಾ ಸಭಾವು ಒಂದು ವಿಶಿಷ್ಟ ರೀತಿಯಾ ಸಂಘವಾಗಿದೆ ಇದು ನಿಶ್ಚಿತ ಕಾರ್ಯಕಾರಿ ಸಮಿತಿಯನ್ನು ಒಳಗೊಂಡಿಲ್ಲ. ಈ ಸಂಘವನ್ನು ಹಿಂದುಳಿದ ಮತ್ತು ಅಲ್ಪ ಸಂಖ್ಯಾತರ ಆಯೋಗದ ನಿರ್ದೇಶಕರಾದ ಕೆ. ಶಿವರಾಮ್ ಮತ್ತು ಪೋಲೀಸ್ ಮಹಾನಿರ್ದೇಶಕರಾದ ಶುಭಾಷ್ ಭರಣಿಯವರ ಹಿಂದುಳಿದ ಮತ್ತು ಬುಡಕಟ್ಟು ಅಭಿವೃದ್ಧಿಯ ಸಲುವಾಗಿ ತೆರೆದಂತೆ ಒಂದು ಸಂಘವಾಗಿದೆ. ಇದು ಬಳ್ಳಾರಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಈ ಸಂಘದ ಮೇಲುಸ್ತುವಾರಿಯನ್ನು ಪರೋಕ್ಷವಾಗಿ ಈ ಅಧಿಕಾರಿಗಳು ನೋಡಿಕೊಳ್ಳುತ್ತಾರೆ.

ಈ ಸಂಘವು ಚೆನ್ನಾಗಿ ನಡೆಯುತ್ತಿದ್ದು ಸರ್ವ ಶಿಕ್ಷ ಅಭಿಯಾನದ ಕೆಲವೊಂದು ಯೋಜನೆಯ ಕುರಿತು ಕಾರ್ಯಕ್ರಮಗಳನ್ನು ಮಾಡುತ್ತಿದ್ದಾರೆ ಮತ್ತು ಬಾಲಕಾರ್ಮಿಕರ ಪುನರ್ವಸತಿಯ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದಾರೆ. ಮತ್ತು ಸರ್ಕಾರದ ಹಲವು ಯೋಜನೆಗಳಾದ ಅಲ್ಪ ಮತ್ತು ಹಿಂದುಳಿದ ವರ್ಗದವರ ಕಲ್ಯಾಣದ ಯೋಜನೆಗಳನ್ನು ಕೂಡಾ ಇವರು ನಡೆಸುತ್ತಿದ್ದಾರೆ.

ಈ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಈ ಅಧಿಕಾರಿಗಳ ನೇತೃತ್ವದ ಒಳ್ಳೆಯ ರೀತಿಯಲ್ಲಿ ನಡೆಸಿಕೊಂಡು ಹೋಗುತ್ತಿದ್ದಾರೆ.

- **ಅಂಬೇಡ್ಕರ ಮಹಾ ಸಂಘ:** ಈ ಅಂಬೇಡ್ಕರ ಮಹಾಸಂಘವು ದಲಿತರು ಮತ್ತು ಹಿಂದುಳಿದ ವರ್ಗದವರು ರಚಿಸಿರುವ ಬಂದು ನೊಂದಾಯಿತ ಸಂಘವಾಗಿದ್ದು, ಈ ಸಂಘವು ಕೂಡ ಮೇಲೆ ತಿಳಿಸಿದಂತೆ ಕೆ. ಶಿವರಾಂ ಅವರ ಪ್ರೋತ್ಸಾಹದೊಂದಿಗೆ ನಡೆಯುತ್ತಿರುವ ಸಂಘವಾಗಿದೆ.

### 3.2 ಬುಡಕಟ್ಟು ಸಮುದಾಯೇತರ ಮೇಲ್ವಿಚಾರಣ ಸಂಸ್ಥೆಗಳು:-

### 3.2.1 ಅಭಿವೃದ್ಧಿ ಸಾಮಾಜಿಕ ಸೇವಾ ಸಂಸ್ಥೆ:-

ಅಭಿವೃದ್ಧಿ ಸಾಮಾಜಿಕ ಸೇವಾ ಸಂಸ್ಥೆ 1992 ನೊಂದಾಯಿತ ಗೊಂಡಿದ್ದು, ಈ ಸಂಸ್ಥೆಯು ಗುಬ, ಬೆಂಗಳೂರು, ಬಳ್ಳಾರಿ, ಬಾಗಲಕೋಟೆ ಜಿಲ್ಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಈ ಸಂಸ್ಥೆಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಏಳು ಸದಸ್ಯರನ್ನು ಒಳಗೊಂಡಿದ್ದು, ಮುಖ್ಯವಾಗಿ ಸಾಮಾನ್ಯ ಕಾರ್ಯದರ್ಶಿಗಳಾದ ಶ್ರೀ ನರಸಿಂಹ ಮೂರ್ತಿಯವರು ಈ ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ನೋಡಿಕೊಳ್ಳುತ್ತಿದ್ದಾರೆ.

**ಸಂಸ್ಥೆಯ ಉದ್ದೇಶ :-**

- ಹಳ್ಳಿಯ ಮತ್ತು ನಗರದ ಜನರಿಗೆ ಸರಿಯಾದ ಸರ್ಕಾರ ಯೋಜನೆಗಳಂತೆ ನೋಡಿಕೊಳ್ಳುವುದು.
- ಶೈಕ್ಷಣಿಕವಾಗಿ ಅವರಿಗೆ ಅಂದರೆ ರಾತ್ರಿಶಾಲೆ ಶಿಕ್ಷಣ, ವಯಸ್ಕರ ಶಿಕ್ಷಣ, ಶಿಕ್ಷಣ, ಜಾಗೃತಿ ಕಾರ್ಯಕ್ರಮಗಳನ್ನು ಮಾಡುವುದು.
- ಗುಂಪುರಚನೆ ಮಾಡಿ ಸಾಮಾಜಿಕ ಪರಿಸರ, ಆರ್ಥಿಕ ಸಮಸ್ಯೆಗಳನ್ನು ಬಗೆಹರಿಸಲಿಕ್ಕೆ ಪ್ರಯತ್ನಿಸುವುದು.
- ಹಳ್ಳಿಯ ಜನರಿಗೆ ರಸಗೊಬ್ಬರದ ಮಾಹಿತಿ, ಮತ್ತು ಅನುದಾನ ಮಾಡುವುದು.
- ಕುಡಿಯವ ನೀರಿನ ವ್ಯವಸ್ಥೆ, ನೀರಾವರಿ ವ್ಯವಸ್ಥೆ, ಮತ್ತು ನೀರು ಇಂಗಿಸುವ ಕಾರ್ಯಕ್ರಮಗಳನ್ನು ಮಾಡುವುದು.
- ಮಕ್ಕಳಿಗೆ ಮತ್ತು ಯುವಕರಿಗೆ ನಾಯಕತ್ವದ ಗುಣಗಳನ್ನು ಬೆಳೆಸುವುದು.
- ಮಹಿಳಾ ಸಬಲೀಕರಣವನ್ನು ಮಾಡುವುದು.
- ಬೇರೆ ಬೇರೆ ಇಲಾಖೆಗಳ ಸಂಪರ್ಕ ಸಾಧಿಸುವುದು.
- ಆರ್ಥಿಕ ಅಭಿವೃದ್ಧಿಯ ಸಲುವಾಗಿ ಆದಾಯೋತ್ಪನ್ನ ಕ್ರಮಗಳು.
- ಆಪ್ತ ಸಮಾಲೋಚನೆ ಮತ್ತು ಸಂಪನ್ಮೂಲ ಕ್ರೂಢೀಕರಣ.

**ಈಗಿನ ಸಂಸ್ಥೆಯ ಕಾರ್ಯಗಳು:-**

1. ಬಾಲ ಕಾರ್ಮಿಕರ ಪುರ್ನವಸತಿ ಹಾಗೂ ಸಮುದಾಯ ಸಶಕ್ತತೆ ಯೋಜನೆ.
2. ಕರ್ನಾಟಕ ರಾಜ್ಯ ಏಡ್ಸ್ ಪ್ರಿವೇನ್ಸನ್ ಸೊಸೈಟಿ.
3. ಜಲ ಸಂವರ್ದನೆ ಯೋಜನೆ.

ಈ ಮೇಲಿನ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲು ಕೆಳಗಿನ ಮಾರ್ಗಗಳನ್ನು ಅನುಸರಿಸಲಾಗುತ್ತದೆ. 1). ಸಮುದಾಯ ಸಬಲೀಕರಣ 2) ಕಾಳಜಿ ಮತ್ತು ಮಕ್ಕಳ ರಕ್ಷಣೆ. 3) ಮಹಿಳೆಯ ಸಾಮಾಜೋ ಆರ್ಥಿಕ ಸಬಲೀಕರಣ.

**1. ಸಮುದಾಯದ ಸಬಲೀಕರಣ:-** ನಾವು ಸಮುದಾಯದ ಸಬಲೀಕರಣವನ್ನು ಮನೆ ಭೇಟಿ ಮಾಡುವುದರಿಂದ ಕುಟುಂಬದ ಆಪ್ತ ಸಮಾಲೋಚನೆಯಿಂದ ಗ್ರಾಮಸಭೆಗಳನ್ನು ಮಾಡುವುದರಿಂದ ಮತ್ತು ಸಮುದಾಯದಲ್ಲಿ ಶಿಕ್ಷಣದ ಬಗ್ಗೆ ಆರೋಗ್ಯದ ಬಗ್ಗೆ ಮೂಲಭೂತ ಹಕ್ಕುಗಳು ಮತ್ತು ಅವಶ್ಯಕತೆಗಳ ಬಗ್ಗೆ. ಜಾತಾ ಮತ್ತು ಬೀದಿ ನಾಟಕಗಳನ್ನು ಮಾಡುವುದರಿಂದ ಭಯಾನುಕ ರೋಗಗಳಾದ ಹೆಚ್.ಐ.ವಿ ಏಡ್ಸ್ ಮತ್ತು ಹೆಪಾಟೈಟಸ್ ಬಿ. ಇಂತಹ ಕಾಯಿಲೆಯಿಂದ ಜಾಗೃತಿಗೊಳ್ಳಲು ಗೋಡೆ ಬರಹವನ್ನು ಬರೆಸುದುವುದರಿಂದ ಆರೋಗ್ಯದ ದೃಷ್ಟಿಯಿಂದ ಆರೋಗ್ಯದ ಶಿಬಿರಗಳನ್ನು ಮಾಡುವುದು ಈ ರೀತಿಯ ಕಾರ್ಯಕ್ರಮಗಳನ್ನು ಮಾಡುವುದರಿಂದ ಸಮುದಾಯದ ಸಬಲೀಕರಣ ಸಾಧ್ಯ ಎಂದು ತಿಳಿದು ಈ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆ.

**2. ಕಾಳಜಿ ಮತ್ತು ಶಿಕ್ಷಣ:** ಸಮುದಾಯ ಎಂದರೆ ಎಲ್ಲಾವರ್ಗದಲ್ಲಿ ಜನರು ಇರುತ್ತಾರೆ. ಹಾಗೆಯೇ ಎಲ್ಲಾ ರೀತಿಯ ಬುದ್ಧಿಮಟ್ಟದವರು ಇರುತ್ತಾರೆ. ತಂದೆ ತಾಯಿಯವರ ಅಲಕ್ಷದಿಂದ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಇದರಿಂದಾಗಿ ಸಂಸ್ಥೆಯು ಕೆಲವೊಂದು ಮಾರ್ಗೋಪಾಯಗಳನ್ನು ಕಂಡುಕೊಂಡು ಈ ರೀತಿಯ ವಿಧಾನಗಳನ್ನು ಅಳವಡಿಸಿ ಶಿಕ್ಷಣಕೊಡುವ ನಿಟ್ಟಿನಲ್ಲಿ ಸಾಗಿದೆ.

ಶಾಲೆ ಬಿಟ್ಟ ಮಕ್ಕಳನ್ನು ಗುರುತಿಸಿ ಸಂಸ್ಥೆಯವರು ಪ್ರಾರಂಭಿಸಿದ ಸಂಸ್ಥೆಯವರು ಪ್ರಾರಂಭಿಸಿದ ಪೂರ್ವ ಪ್ರಾಥಮಿಕ ಶಾಲೆಗೆ ಸೇರಿಸುವುದು. ಮತ್ತು ಕಲಿಕೆಯಲ್ಲಿ ಹಿಂದುಳಿದ ಮಕ್ಕಳನ್ನು ಸಂಸ್ಥೆಯವರು ನಡೆಸುವ ಸೇತುಬಂಧ ಶಾಲೆಗೆ ಸೇರಿಸಿ ತರಬೇತಿಯಿಂದ ಅವರನ್ನು ಮುಖ್ಯವಾಹಿನಿ ಶಾಲೆಗೆ ಸೇರಿಸುವುದಾಗಿದೆ, ಮಕ್ಕಳ ಆರೋಗ್ಯ ತಪಾಸಣೆ ಮಾಡಿಸಿ ಅವರಿಗೆ ಚಿಕಿತ್ಸೆಕೊಟ್ಟು ಮತ್ತು ಆರೋಗ್ಯದ ಕಾಡುಗಳನ್ನು ವಿತರಿಸುವ ಕಾರ್ಯಗಳನ್ನು ಸಹ ಮಾಡುತ್ತದೆ. ಮತ್ತು ಮಕ್ಕಳ ಶಿಕ್ಷಣದ ಅರಿವು ಮೂಡಿಸುವ ಉದ್ದೇಶದಿಂದ ಶಾಲಾಉಸ್ತುವಾರಿ ಹಾಗೂ ಮೇಲ್ವಿಚಾರಣಾ ಸಮಿತಿ ಸದಸ್ಯರಿಗೆ ಅವರ ಜವಾಬ್ದಾರಿಗಳನ್ನು ಕುರಿತು ತರಬೇತಿ ಮತ್ತು ಜಾಗೃತಿ ಕಾರ್ಯಕ್ರಮ ಮಾಡಲಾಗುತ್ತದೆ.

**3. ಮಹಿಳೆಯರ ಸಮಾಜೋ ಆರ್ಥಿಕ ಸಬಲೀಕರಣ :** ಒಂದು ಕುಟುಂಬ ಅಥವಾ ಸಮುದಾಯ ಉದ್ದಾರ ವಾಗಬೇಕೆಂದರೆ ಅಲ್ಲಿಯ ಜನರು ಆರ್ಥಿಕವಾಗಿ, ಸಾಮಾಜಿಕವಾಗಿ ಉದ್ದಾರವಾಗಬೇಕು ಅದಕ್ಕೋಸ್ಕರ ಈ ಅಭಿವೃದ್ಧಿ ಸಂಸ್ಥೆಯನ್ನು ಈ ಒಂದು ಮಾನದಂಡಗಳನ್ನು ಉಪಯೋಗಿಸಿದ್ದಾರೆ. ಮೊದಲಿಗೆ ಮಹಿಳೆಯರ ಸ್ವಸಹಾಯ ಸಂಘಗಳನ್ನು ರಚಿಸುವುದು ಅವರಿಗೆ ಬ್ಯಾಂಕ್ ಸಂಪರ್ಕ ಬೆಳೆಸುವುದು ಮತ್ತು ಸರಿಯಾದ ರೀತಿಯಲ್ಲಿ ಸಂಘ ನಡೆಯಲಿಕ್ಕೆ ವಾರಕ್ಕೊಮ್ಮೆ ಸಭೆ ಕರೆಯುವಂತೆ

ಮಾಡುವುದು. ಸ್ವಸಹಾಯ ಸಂಘಟನೆಯ ಕಲ್ಪನೆ ಮತ್ತು ನಿರ್ವಹಣೆಯ ಬಗ್ಗೆ ತರಬೇತಿ ಕೊಡುವುದು. ಅವರಲ್ಲಿ ನಾಯಕತ್ವದ ಗುಣಗಳನ್ನು ಬೆಳೆಸುವುದು ಮತ್ತು ಸ್ವ ನಿರ್ಣಯ ತೆಗೆದುಕೊಳ್ಳಲಿಕ್ಕೆ ತರಬೇತಿಗಳನ್ನು ಕೊಡುವುದು. ಸಮುದಾಯದ ಆರೋಗ್ಯ ಮತ್ತು ಸಮಸ್ಯೆಯ ನಿರ್ವಹಣೆ ಬಗ್ಗೆ ತರಬೇತಿಯನ್ನು ಕೊಡುವುದು ಈ ರೀತಿಯಾಗಿ ಮಹಿಳೆಯರನ್ನು ಸಬಲರನ್ನಾಗಿ ಮಾಡುವಲ್ಲಿ ಈ ಅಭಿವೃದ್ಧಿ ಸಂಸ್ಥೆ ಶ್ರಮಿಸುತ್ತದೆ.

ವಯಸ್ಕರನ್ನು ಸದೃಡರನ್ನಾಗಿ ಮಾಡಲು ಅವರಿಗೆ ವೃತಿ ತರಬೇತಿ ಕೊಡುವದು. ಸ್ವಲ್ಪ ಮಟ್ಟಿನ ಧನ ಸಹಾಯ ಮಾಡುವುದು ಅವರ ವೃತ್ತಿಗೆ ಮತ್ತು ಕೆಲವೊಂದು ಸಾಕ್ಷರತಾ ಕೇಂದ್ರಗಳನ್ನು ತೆರೆಯವುದಾಗಿದೆ.

**3.2.2. ಅಂಗವಿಕಲ ಪುನಶ್ಚೇತರನ ಸಂಸ್ಥೆ:**

ಅಂಗವಿಕಲರ ಪುನಶ್ಚೇತನ ಸಂಸ್ಥೆಯು 1991 ರಲ್ಲಿ ಪ್ರಾರಂಭವಾಯಿತು. ಈ ಸಂಸ್ಥೆಯು ಗಂಗಾವತಿ, ಕುಷ್ಟಗಿ ಹಗರಿಬೊಮ್ಮನಹಳ್ಳಿಯಲ್ಲಿ ಕಾರ್ಯನಿರ್ವಹಿಸುತ್ತದೆ ಇದರ ಸಂಸ್ಥಾಪಕರ ಅಧ್ಯಕ್ಷರು ಬಿ.ಸಿ. ಪಾಟೀಲ್ ರವರು ಸಂಸ್ಥೆಯ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದಾರೆ. ಈ ಸಂಸ್ಥೆಯು ಏಳು ಸದಸ್ಯರ ಕಾರ್ಯಕಾರಿ ಸಮಿತಿಯನ್ನು ಹೊಂದಿದೆ. ಈ ಸಂಸ್ಥೆ ಈ ಕೆಳಗಿನ ಕೆಲವೊಂದು ಪ್ರಾಯೋಜನೆಗಳನ್ನು ಅನುಷ್ಠಾನ ಗೊಳಿಸುತ್ತದೆ.

1. ಸಿ.ಸಿ. ಎಫ್.
2. ಸಿ.ಬಿ.ಎಮ್.
3. ಸಮಗ್ರ ಶಿಕ್ಷಣ
4. ವಸತಿ ನಿಲಯ ( ವಿದ್ಯಾರ್ಥಿನಿ).
5. ವೃದ್ಧಾಶ್ರಮ

**1) ಸಿ.ಸಿ. ಎಫ್:–**

ಸಿ.ಸಿ. ಎಫ್. ಎಂದರೆ ಕ್ರಿಶ್ಚಿಯನ್ ಚೈಲ್ಡ್ ಪಂಡ್, ಇದು, ಅಮೇರಿಕಾದ ಅನುದಾನದಿಂದ ನಡೆಯುತ್ತಿರುವ ಒಂದು ಯೋಜನೆ ಈ ಯೋಜನೆ ಅಡಿಯಲ್ಲಿ ಸಂಸ್ಥೆಯು ಆಯ್ದುಕೊಂಡು ಕ್ಷೇತ್ರದಲಿ ಯಾರು ಬಡತನದ ರೇಖೆಗಿಂತ ಕೆಳಗಿರುತ್ತಾರೋ ಅಂತಮಕ್ಕಳನ್ನು ಆಯ್ದುಕೊಂಡು ಅವರ ಸರ್ವಾಂಗೀಣ ಅಭಿವೃದ್ದಿಯ ಸಲುವಾಗಿ ಶ್ರಮಿಸುತ್ತದೆ. ಅದು ಕೆಲವೊಂದು ಮಾರ್ಗಗಳ ಮೂಲಕ ತನ್ನ ಕಾರ್ಯವನ್ನು ಮಾಡುತ್ತದೆ. ಅವುಗಳು ಈ ಕೆಳಗಿನಂತಿವೆ.

1. Health and sanitation (ಆರೋಗ್ಯ ಮತ್ತು ನೈರ್ಮಲೀಕರಣ)
2. Basic education (ಮೂಲ ಶಿಕ್ಷಣ)
3. Nutrition (ಪೌಷ್ಟಿಕ ಆಹಾರ)
4. Leep. (ಜೀವನ ನಿರ್ವಹಣೆ ಮತ್ತು ಆರ್ಥಿಕ ಪ್ರಗತಿ)

ಈ ಮೂರು ಭಾಗಗಳಲ್ಲಿ ಈ ಪ್ರಾಯೋಜನೆಯು ಕಾರ್ಯಗಳನ್ನು ಕೈಗೊಳ್ಳುತ್ತದೆ.

**1) Health and Santiation (ಆರೋಗ್ಯ ಮತ್ತು ನೈರ್ಮಲೀಕರಣ) :-**

ಈ ಕಾರ್ಯಕ್ರಮದ ಅಡಿಯಲ್ಲಿ ಪ್ರತಿಯೊಂದು ಹಳ್ಳಿಯಲ್ಲಿ ಆರೋಗ್ಯದ ಬಗ್ಗೆ ಜಾಗೃತಿ ಮೂಡಿಸಲು ಜಾತಾ ಮತ್ತು ಬೀದಿ ನಾಟಕಗಳನ್ನು ಮಾಡಲಾಗುತ್ತಿದ್ದು ಮತ್ತು ಈ ಸಂಸ್ಥೆಯ ವತಿಯಿಂದ ಎಂ.ಬಿ.ಬಿ.ಎಸ್. ಡಾಕ್ಟರನ್ನು ಆಯ್ಕೆ ಮಾಡಿ ಕ್ಷೇತ್ರ ಕಾರ್ಯದಲ್ಲಿ ಪ್ರಾಯೋಜನೆಗೆ ಒಳಪಡುವ ಕುಟುಂಬಗಳನ್ನು ಸರಿಯಾದ ರೀತಿಯಾ ಆರೋಗ್ಯ ಕಾಪಾಡುವುದು. ಅವರ ಜವಾಬ್ದಾರಿಯಾಗಿತ್ತು. ಮತ್ತು ಸಮುದಾಯದ ಅರೋಗ್ಯದ ಸಲುವಾಗಿ ಸಮುದಾಯ ಶೌಚಾಲಯವನ್ನು ನಿರ್ಮಿಸಲಾಗಿತ್ತು ಮತ್ತು ಅಂಗವಿಕಲರಿದ್ದ ಕುಟುಂಬ ದವರಿಗೆ ಉಚಿತ ಶೌಚಾಲಯವನ್ನು ಕಟ್ಟಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಮತ್ತು ಅಂಗವಿಕಲರಿಗೆ ಅವರಿಗೆ ಅವಶ್ಯವಿರುವ ಉಪಕರಣಗಳ ಕಲ್ಪಿಸಿಕೊಡುವ ವ್ಯವಸ್ಥೆಯನ್ನು ಕೊಡ ಮಾಡಲಾಗಿತ್ತು ನಂತರ ಯಾವುದಾದರೂ ಮಕ್ಕಳಿಗೆ ಶಸ್ತ್ರ ಚಿಕಿತ್ಸೆ ಅವಶ್ಯವಿದ್ದರೆ ಪ್ರಾಯೋಜನಾ ವತಿಯಿಂದ ಚಿಕಿತ್ಸೆ ಮಾಡಿಸಲಾಗುತ್ತಿತ್ತು.

ಸ್ವತಂತ್ರ ಬಂದು ಆರು ದಶಕಗಳೇ ಉರುಳಿ ಹೋಗಿವೆ. ಆದರೆ ನಮ್ಮ ರಾಷ್ಟ್ರದಲ್ಲಿ ಸುಮಾರು 24 ಕೋಟಿ ಜನರು ಇನ್ನೂ ಬಡತನ, ವಲಸೆ, ನಿರುದ್ಯೋಗ, ಹಸಿವು, ಅನಾರೋಗ್ಯ ಅಪೌಷ್ಟಿಕತೆಯಿಂದ ನರಳುತ್ತಿರುವವರ ಸಂಖ್ಯೆ ಮಾತ್ರ ಹೆಚ್ಚುತ್ತಿಲೇ ಇದೆ. ಆದರೆ ಪರಿಚ್ಛೇದ 21 ರ ಪ್ರಕಾರ ಸಂವಿಧಾನದಲ್ಲಿ, ಬದುಕುವ ಹಕ್ಕು ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಸಹ 2003 ಜನವರಿ 17 ರಂದು ಸ್ಪಷ್ಟವಾಗಿ ಪ್ರತಿ ಮನುಷ್ಯ ಹಸಿವಿನಿಂದ ಮುಕ್ತವಾಗಿರಬೇಕೆಂದು ಮೂಲಭೂತ ಹಕ್ಕು ಹೇಳುತ್ತದೆ. ಆಹಾರ ಭದ್ರತೆಯನ್ನು ಬದಗಿಸಬೇಕಾದ ಜವಬ್ದಾರಿಯು ನಮ್ಮ ಸರ್ಕಾರದ್ದಾಗಿದ್ದರೂ ಇಂದಿಗೂ ಸಹ ಜನರು ಹಸಿವಿನಿಂದ ಸಾಯುತ್ತಿರುವುದು ಈ ದೇಶದ ಜನತೆಗೆ ಮತ್ತು ವ್ಯವಸ್ಥೆಗೆ ಧಕ್ಕೆ ತರುವಂತದ್ದು ಎಂಬುದು ಅರಿವಿಲ್ಲದವರಂತೆ ಕಣ್ಣು,ಕಿವಿ, ಮುಚ್ಚಿ, ಜಾಣ, ಕುರುಡ, ಕಿವುಡರಂತೆ ವರ್ತಿಸುತ್ತಿರುವ ನಮ್ಮನಾಳುವ ಪ್ರತಿನಿದಿಗಳ ಬಗ್ಗೆ ಮಾತನಾಡುವುದಕ್ಕಿಂತ ದಿನಕ್ಕೊಂದು ಹೊತ್ತಿಗೂ ತಮ್ಮ ಹೊಟ್ಟೆ ತುಂಬಿಸಿಕೊಳ್ಳಲಾಗದೆ ವಂಚಿತರಾದ ಕೋಟ್ಯಾಂತರ ಜನರು ಬದುಕುವ ಹಕ್ಕಿಗಾಗಿ ಹೋರಾಟ ಮಾಡುವ ಅನಿವಾರ್ಯತೆ ನಮ್ಮೆಲ್ಲರ ಮುಂದಿದೆ.

ದೇಶದ ಪ್ರತಿಯೊಂದು ಪ್ರಜೆಗೂ ಆಹಾರ ಭದ್ರತೆಯನ್ನು ಒದಗಿಸುವುದು ಸರ್ಕಾರದ ಜವಬ್ದಾರಿ ಹಾಗೂ ಹಸಿವು ಮತ್ತು ಅಪೌಷ್ಟಿಕ ಕೊರತೆಯಿಂದ ನರಳಬಾರದೆಂಬ ಕಾರಣಕ್ಕಾಗಿ ದಿನಾಂಕ : 28-11-01 ರಂದು ಸರ್ವೋಚ್ಚನ್ಯಾಯಾಲಯ ನೀಡಿದ ಐತಿಹಾಸಿಕ ತೀರ್ಪೂ ಹಾಗೂ ಆಹಾರ ಭದ್ರತೆಗೆ ಪೂರಕವಾದ ಹಲವಾರು ಆದೇಶಗಳು ಇಂದಿಗೂ ಬರುತ್ತಲೇ ಇವೆ. ಈ ಎಲ್ಲಾ ಆದೇಶಗಳು ಜನ ಸಾಮಾನ್ಯರ ಹಕ್ಕುಗಳಾಗಿ ಜಾರಿಯಾಗಬೇಕಾದರೆ ಜನರ ಬಾಗವಹಿಸುವಿಕೆ ಬಹಳ ಅಗತ್ಯ. ಹಾಗಾಗಿ

ಆಹಾರದ ಹಕ್ಕಿಗಾಗಿ ಆಂದೋಲನ ಕಳೆದ ಆರು ವರ್ಷಗಳಿಂದ ಒಂದು ಸಂಘಟನೆಯಾಗಿ ರಾಜ್ಯಾದ್ಯಾಂತ ಹರಡಿ ಆಹಾರದ ಹಕ್ಕನ್ನು ಒಂದು ಆಂದೋಲನವನ್ನಾಗಿ ರೂಪಿಸುವಲ್ಲಿ, ಹಲವಾರು, ಆಯಾಮಗಳನ್ನು ಕಂಡುಕೊಂಡಿದೆ. ಈ ಸಂದರ್ಭದಲ್ಲಿ, ರಾಜ್ಯದ ಎಲ್ಲಾ ಭಾಗಗಳಲ್ಲಿನ ಪ್ರಗತಿಪರ ಸಂಘಟನೆಗಳು, ದಲಿತ ಸಂಘಟನೆಗಳೂ, ರೈತ ಸಂಘಟನೆಗಳು, ವಿವಿಧ ಕಾರ್ಮಿಕ ಸಂಘಟನೆಗಳು, ಸಮುದಾಯ ಆಧಾರಿತ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳ ಒಕ್ಕೂಟ, ಮಹಿಳಾ ಸ್ವಸಹಾಯ ಸಂಘಗಳ ಒಕ್ಕೂಟ, ಉದ್ಯೋಗ ಖಾತ್ರಿ ಕೂಲಿಕಾರ್ಮಿಕರ ಸಂಘಟನೆಗಳು, ಯುವ ಸಂಘಟನೆಗಳೂ, ವಿದ್ಯಾರ್ಥಿ ಒಕ್ಕೂಟಗಳು, ಇನ್ನೂ ಮುಂತಾದ ಸಂಘಟನೆಗಳು ಮನುಷ್ಯನ ಆರೋಗ್ಯ, ಆಹಾರದೆ ಬಗ್ಗೆ ಹೋರಾಡಲು ಮುಂದಾಗಿವೆ.

ಇಂತಹ ನಿಟ್ಟಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸರ್ಕಾರದ ಮತ್ತು ವಿದೇಶದ ಧನ ಸಹಾಯದೊಂದಿಗೆ ಆರೋಗ್ಯ ಮತ್ತು ಆಹಾರದ ದೃಷ್ಟಿಯಿಂದ ಈ ಕೆಳಗಿನ ಮಾರ್ಗಗಳನ್ನು ಅನುಸರಿಸುತ್ತಿದೆ.

ಈ ಮೇಲೆ ತಿಳಿಸಿದಂತೆ ವಿಭಾಗದಲ್ಲಿ, ಸಮುದಾಯ ಮತ್ತು ವೈಯುಕ್ತಿಕ ಆರೋಗ್ಯವನ್ನು ಗಮನಿಸಿ ಈ ವಿಧಾನಗಳನ್ನು ಅನುಸರಿಸುತ್ತಿದೆ.

ಮೊದಲಿಗೆ ಮಗುವಿನ ಆರೋಗ್ಯದ ದೃಷ್ಟಿಯಿಂದ ಗರ್ಭಿಣಿ ತಾಯಿಗೆ ಸರಿಯಾದ ರೀತಿಯ ಹಾರೈಕೆ ಮಗು ಹೊಟ್ಟೆಯಲ್ಲಿ ಚೆನ್ನಾಗಿ ಬೆಳೆಯುತ್ತಿದಯೋ ಇಲ್ಲವೋ ಎಂದು ವೈದ್ಯರು ಕಡೆಯಿಂದ ಪರೀಕ್ಷಿಸುವುದು ಮತ್ತು ಪೌಷ್ಟಿಕ ಆಹಾರವನ್ನು ಸೇವಿಸಲು ಹೇಳುವುದು ಮತ್ತು ಅದರೆ ಮಹತ್ವವನ್ನು ತಿಳಿಸಿಕೊಡುವುದು. ಹೆರಿಗೆಯನ್ನು ಆಸ್ಪತ್ರೆಯಲ್ಲಿಯೇ ಮಾಡಲು ಪ್ರಯತ್ನಿಸುವುದು ಹುಟ್ಟಿದ ಮಗುವಿಗೆ ಪ್ರತಿಯೊಂದು ಲಸಿಕೆಯನ್ನು ತಪ್ಪದೇ ಹಾಕಿಸುವುದು. ಅವನ ಆರೋಗ್ಯದ ದೃಷ್ಟಿಯಿಂದ ಪೌಷ್ಟಿಕ ಆಹಾ ಒದಗಿಸುವುದು ಮತ್ತು ಸಮುದಾಯದ ಆರೋಗ್ಯದ ಸಲುವಾಗಿ ಆರೋಗ್ಯ ಶಿಬಿರಗಳನ್ನು ಮಾಡುವುದು ಮತ್ತು ಭಯಾನಕ ರೋಗಗಳಾದ ಊಐಗಿ/ಂಐಆಐ ಕಾಯಿಲೆಯನ್ನು ಪತ್ತೆಹಚ್ಚುವುದು ಜಾಗೃತಿ ಮಾಡಿಸುವುದು, ಅಂತಹ ವ್ಯಕ್ತಿಗಳು ಏನಾದರೂ ಕಂಡು ಬಂದಲ್ಲಿ ಮುಂದಿನ ಚಿಕಿತ್ಸೆಗೆ ಗುರಿಪಡಿಸುವುದು.

ಮತ್ತು ಇದೇ ವಿಭಾಗದಲ್ಲಿಯೂ ಪ್ರತಿಯೊಬ್ಬರ ಆರೋಗ್ಯದ ದೃಷ್ಟಿಯಿಂದ ಎಲ್ಲಾ ಮನೆಗೆ ಶೌಚಾಲಯದ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕೆಂದು ಪ್ರತಿಯೊಂದು ಮನೆಗೆ ಅವರ ನೆರವಿನೊಂದಿಗೆ ಶೌಚಾಲಯ ವ್ಯವಸ್ಥೆಯನ್ನು ಮಾಡಿ ಕೂಡಲಾಗಿದೆ.

**2)Basic Education(ಮೂಲ ಶಿಕ್ಷಣ):-**

ಇಂದು ನಮ್ಮ ಸಂವಿಧಾನದಲ್ಲಿ ಶಿಕ್ಷಣವೂ ಮೂಲಭೂತಹಕ್ಕಾಗಿದೆ. ಆದರೆ ಎಷ್ಟೋ ಮಕ್ಕಳು ಇನೂ ಕೂಡ ಶಾಲೆಯಿಂದ ಹೊರೆಗುಳಿದ್ದಾರೆ. ಅದಕ್ಕಾಗಿ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಅನೇಕ ಕಾರ್ಯಕ್ರಮಗಳನ್ನು ಹಾಕಿ ಕೊಂಡಿದೆ. ಉದಾ : ಬಾಲಕಾರ್ಮಿಕತೆಯನ್ನು ನಿರ್ಮೂಲನೆಗೊಳಿಸುವುದು ದೇವದಾಗಿ ಮಕ್ಕಳಿಗೆ ಪುನರ್ವವಸತಿಯನ್ನು ಕಲ್ಪಸಿಕೊಡುವುದು, ಮತ್ತು ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯವನ್ನು ಮಾಡುತ್ತಿದೆ.

ಯಾವುದೇ ಕಾರಣಕ್ಕೂ ಮಕ್ಕಳನ್ನು ಶಾಲೆ ಬಿಡಿಸಬಾರದು ಎಂಬ ಕಾರಣಕ್ಕೂ ಪಾಲಕರಿಗೆ ಮತ್ತು ಪೋಷಕರಿಗೆ ಅರಿವು ಮೂಡಿಸುವ ಉದ್ದೇಶದಿಂದ ಜಾತಾ, ಬೀದಿ ನಾಟಕಗಳನ್ನು ಕೈಗೊಳ್ಳಲಾಗುತ್ತಿದೆ. ಮತ್ತು ಮಕ್ಕಳನ್ನು ಬಾಲಕಾರ್ಮಿಕತೆಯಿಂದ ಬಿಡಿಸಿ ಮುಖ್ಯವಾಹಿನಿಗೆ ತರಲು ಅವರಿಗೆ ಸೇತು ಬಂದ ಶಾಲೆಯನ್ನು ಕಲ್ಪಿಸಿಕೊಡಲಾಗಿದೆ. ಮತ್ತು ಕೆಲವೊಂದು ಸಮುದಾಯಗಳಲ್ಲಿ ಅವರಿಗೋಸ್ಕರ ಪೂರ್ವ ಪ್ರಾಥಮಿಕ ಶಾಲೆಯನ್ನು ತೆರೆಯಲಾಗದೆ. ಮತ್ತು ಕೆಲವೊಂದು ಶಾಲೆಗಳಿಗೆ ಗಣಿತ, ವಿಜ್ಞಾನ, ಇಂಗ್ಲೀಷ ಶಿಕ್ಷಕರನ್ನು ಸಂಸ್ಥೆಯ ವತಿಯಿಂದ ನೇಮಿಸಲಾಗಿದೆ ಮತ್ತು ಶಾಲೆಗಳಿಗೆ 50,000 ದ ವರೆಗೆ ಬೆಲೆ ಬಾಳುವ ಆಟದ ಸಾಮಾನುಗಳನ್ನು ಸಹ ವಿತರಿಸಲಾಗಿದೆ ಮತ್ತು ಮಕ್ಕಳ ಗುಣಮಟ್ಟವನ್ನು ಕಂಡು ಹಿಡಿಯಲು ಸಂಸ್ಥೆಯ ವತಿಯಿಂದ ಅವರಿಗೆ ತರಬೇತಿಯನ್ನು ಕೂಡಿಸಲಾಗಿದೆ.

ಇಷ್ಟೆಲ್ಲಾ ಅಲ್ಲದೇ ಅವರಿಗೆ ಅಂದರೆ ಮಕ್ಕಳ ಶಿಕ್ಷಣಕ್ಕೆ ಅನೇಕ ರೀತಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಹಕಾರ ನೀಡುತ್ತಿದೆ ಮತ್ತು ಅಂಗವಿಕಲ ಮತ್ತು ಬುದ್ಧಿಮಾಂದ್ಯ ಮಕ್ಕಳಿಗೂ ಸಹ ಶಿಕ್ಷಣವನ್ನು ಕೂಡಾ ಇದೇ ಸಂಸ್ಥೆಯೇ ಕೂಡಲಾಗುತ್ತಿದೆ. ಯಾವುದೇ ಮಕ್ಕಳನ್ನು ಜಾತಿ, ಬೇದ ಮಾಡದೇ ಎಲ್ಲಾ ಮಕ್ಕಳು ಒಂದೇ ಎಂದು ಭಾವಿಸುವುದು, ಮಕ್ಕಳ ಹಕ್ಕುಗಳನ್ನು ಗೌರವಿಸುವುದು, ಮಕ್ಕಳಿಗೆ ದೈಹಿಕ, ಹಾಗೂ ಮಾನಸಿಕ ಶಿಕ್ಷನೀಡದೆ ಸಕಾರಾತ್ಮಕೆ ಪ್ರೇರಣೆಯಿಂದ ತಿದ್ದುವುದು, ಮಕ್ಕಳಿಲ್ಲಿ ಬಾಯಿಪಾಠ ಮಾಡಿಸುವುದಕ್ಕಿಂತ ಅಥರವಾಗುವ ರೀತಿಯಲ್ಲಿ ತರಗತಿಗಳನ್ನು ತೆಗೆದುಕೊಳ್ಳುವುದು, ಸಂಸ್ಥೆಯಲ್ಲಿ, ಯಾವುದೇ ವೈಯುಕ್ತಿಕ ಕೆಲಸವನ್ನು ಮಕ್ಕಳ ಕೈಯಲ್ಲಿ, ಮಾಡಿಸದಂತೆ ನೋಡಿಕೊಳ್ಳಬೇಕು, ಹೆಣ್ಣು, ಗಂಡು ಎಂಬ ಬೇದವಿಲ್ಲದೆ ಜವಬ್ದಾರಿಗಳನ್ನು ಸಮನವಾಗಿ ಹೆಚ್ಚವುದು ದೈಹಿಕ ನ್ಯೂನ್ಯತೆಉಳ್ಳ ಮಕ್ಕಳನ್ನು ಇತರೆಮಕ್ಕಳಂತೆ ಸಮನಾಗಿ ಕಾಣುವುದು, ಆಗಾಗೆ ಮಕ್ಕಳ ಅಭಿಪ್ರಾಯಗಳನ್ನು ತಿಳಿದುಕೊಳ್ಳುವುದು. ಈ ರೀತಿಯಾಗಿ ಸಂಸ್ಥೆಯು ಮೂಲಭೂತ ಶಿಕ್ಷಣವನ್ನು ನಿರ್ವಹಿಸುತ್ತದೆ.

**4) Nutrition(ಪೌಷ್ಟಿಕ ಆಹಾರ):-**

ಈ ವಿಭಾಗದಲ್ಲಿಯೂ ಕೂಡ ಮಕ್ಕಳ ಆರೋಗ್ಯದ ಬಗ್ಗೆ ಕಾಳಜಿ ಮಾಡುವುದಾಗಿದೆ. ಸಮುದಾಯದ ಪ್ರತಿಯೊಂದು ಮಗು ಮೂಲ ಅವಶ್ಯಕ ಲಸಿಕೆಗಳನ್ನು ಹಾಕಿಸಿಕೊಂಡಿದೆಯೋ ಅಥವಾ ಇಲ್ಲವೋ ? ಮತ್ತು ಮಗು ಏನಾದರೂ ರಕ್ತ ಹೀನತೆಯಿಂದ ಬಳಲುತ್ತಿದ್ದರೆ ಅದಕ್ಕೆ ಚಿಕಿತ್ಸೆ ಒದಗಿಸುವುದು ಮತ್ತು ಏನಾದರೂ ಅಂಗವಿಕಲತೆಯಿಂದ ಕೂಡಿದ್ದರೆ ಅದಕ್ಕೆ ಬೇಕಾಗುವ ಉಪಕರಣವನ್ನು ಒದಗಿಸುವುದು ಅಥವಾ ಮಡರೂ ಸ್ವಲ್ಪಮಟ್ಟಿಗೆ ಅಂಗವಿಕಲತೆ ಇದ್ದು ಅದನ್ನು ಶಸ್ತ್ರ ಚಿಕಿತ್ಸೆಯಿಂದ ಮಾಡುವಂತಿದ್ದರೆ. ಅದನ್ನು ಶಸ್ತ್ರ ಚಿಕಿತ್ಸೆಯಿಂದ ಗುಣ ಪಡಿಸುವುದು ಸಮುದಾಯದ ಮಕ್ಕಳಲ್ಲಿ ಏನಾದರೂ ಆರೋಗ್ಯದ ಸಮಸ್ಯೆ ಬಂದರೆ ಅವನ್ನು ಸಂಸ್ಥೆಯವರು ಆಸಕ್ತಿ ವಹಿಸಿ ಚಿಕಿತ್ಸೆಯನ್ನು ಕೊಡಿಸುತ್ತಾರೆ. ಈ ವಿಭಾಗದಲ್ಲಿ ಸಮುದಾಯದ ಪಾಲಕ ಪೋಷಕರಿಗೆ ಮಕ್ಕಳ ಬಗ್ಗೆ ಕಾಳಜಿ, ಮತ್ತು ಅರಿವು ಮೂಡಿಸುವ ಸಲುವಾಗಿ ಆರೋಗ್ಯವಂತ ಮಕ್ಕಳ ಶಿಬಿರವನ್ನು ನಡೆಸಿ ಉತ್ತಮ ಮಗುವಿವಿಗೆ ಬಹುಮಾನ ವಿತರಿಸುವ ಪರಿಸಣ ಇವರಿಂದ ಪಾಲಕರೂ ಜಾಗೃತಿಗೊಂಡು ತಮ್ಮ ಮಕ್ಕಳ ಕಡೆ ಗಮನಹರಿಸುತ್ತಾರೆ.

**4) Leep(ಜೀವನ ನಿರ್ವಹಣೆ ಮತ್ತು ಆರ್ಥಿಕ ಪ್ರಗತಿ):-**

Leep ಎಂದರೆ Liveliwood Econamic Enhancement Programme ಅಂದರೆ ಇದರ ಉದ್ದೇಶ ಸಮುದಾಯವನ್ನು ಆರ್ಥಿಕವಾಗಿ ಸದೃಢರನ್ನಾಗಿ ಮಾಡುವುದು ಸಮುದಾಯದಲ್ಲಿರುವ ಸ್ವಸಹಾಯ ಸಂಘಗಳನ್ನು ಗುರುತಿಸುವುದು ಮತ್ತು ಉಳಿದಂತೆ ಹೆಣ್ಣು ಮಕ್ಕಳನ್ನು ಸೇರಿಸಿ ಸ್ವಸಹಾಯ ಸಂಘಗಳನ್ನು ರಚಿಸುವುದು ಮತ್ತು ಅವರಿಗೆ ಸಂಘದ ನಿರ್ವಹಣೆ ಬಗ್ಗೆ, ಉಳಿತಾಯದ ಬಗ್ಗೆ ಪರಿಕಲ್ಪನೆ ಬಗ್ಗೆ ಬ್ಯಾಂಕ್ ಮತ್ತು ಇತರ ಸಂಪರ್ಕಗಳ ಬಗ್ಗೆ ತಿಳಿಸಿಕೊಡುವುದು ಮತ್ತು ಸರ್ಕಾರದಿಂದ ಸಿಗುವ ಸೌಲಭ್ಯಗಳನ್ನು ಒದಗಿಸಿಕೊಡವುದು ಈ ರೀತಿಯ ಕೆಲಸವನ್ನು ಸಂಸ್ಥೆಯ ಕೆಲಸಗಾರ ಸಂಘದ ಏಳಿಗೆಗಾಗಿ ದುಡಿಯುತ್ತಾನೆ ಮತ್ತು ಇವರಿಗೋಸ್ಕ ಸಂಸ್ಥೆಯ ಈಕ ಕೆಳಗಿ ಸಹಾಯವನ್ನು ಮಾಡುತ್ತದೆ.

<u>ತರಬೇತಿ:</u> ಸ್ವಸಹಾಯ ಸಂಘದ ಹೆಣ್ಣುಮಕ್ಕಳಿಗೆ ಆರ್ಥಿಕ ಅಭಿವೃದ್ಧಿಯ ಸಲುವಾಗಿ ಕೆಲವೊಂದು ತರಬೇತಿಗಳನ್ನು ಮಾಡಲಾಗಿದೆ. 65 : ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ರೊಟ್ಟಿ ರಯಾರಿಸುವುದು, ಚಾಪೆ ಎಣೆಯುವುದು, ಬುಟ್ಟಿ ತಯಾರಿಸುವುದು ಹೊಲಿಗೆ ತರಬೇತಿ ಇನ್ನು ಮುಂತಾದ ತರಬೇತಿಗಳನ್ನು ಸ್ವಸಹಾಯ ಸಂಘದ ಹೆಣ್ಣುಮಕ್ಕಳಿಗೆ ಕೊಟ್ಟಿರೆ, ಮಯಸ್ಕರಿಗೆ, ಸಣ್ಣಗುಡಿಕೈಗಾರಿಕೆಗೆ ಉದಾ : ಬಿದಿರು

ಕೆಲಸಗಳನ್ನು ಮಾಡಲು ಮತ್ತು ತಾಂತ್ರಿಕ ಕೆಲಸಗಳ ನಿರ್ವಹಣೆ, ಮೋಟಾರು ರಿವೈಂಡಿಂಗ್ ಈ ತರಹದ ತರಬೇತಿಗಳನ್ನು ಕೊಡಲಾಗಿದೆ.

<u>ಧನ ಸಹಾಯ:</u> ಸಮುದಾಯದಲ್ಲಿ ಯಾರು ಹಂತದಲ್ಲಿರುತ್ತಾರೋ ಮತ್ತು ಅಂತವರು ಯಾರು ಸ್ವಸಹಾಯ ಸಂಘದಲ್ಲಿರುತ್ತಾರೋ ಅಂತವರಿಗೆ ಆರ್ಥಿಕ ಅಭಿವೃದ್ಧಿಯ ಸಲುವಾಗಿ ಅವರಿಗೆ ಐನುಗಾರಿಕೆ ಮಾಡಲು, (ದನ ಸಕಾಣಿಕೆ, ಕುರಿಸಕಾಣಿಕೆ) ಸಂಸ್ಥೆವತಿಯಿಂದ ಧನ ಸಹಾಯ ಮಾಡಲಾಗುತ್ತದೆ. ನಂತರ ವಯಸ್ಕರಿಗೆ ಆರ್ಥಿಕ ಅಭಿವೃದ್ಧಿಯ ಸಲುವಾಗಿ ಉದಾ : ಅಂಗಡಿ ಇಡಲು, ತರಕಾರಿ ವ್ಯಾಪಾರ ಮಾಡಲು ಬದಿರು ವ್ಯಾಪಾರ ಮಾಡಲು ಸಂಸ್ಥೆಯವರು ಧನ ಸಹಾಯ ಮಾಡುತ್ತಾರೆ.

<u>ಜಾಗೃತಿ ಕಾರ್ಯಕ್ರಮ :</u>

ಸ್ವಸಹಾಯ ಸಂಘದವರು, ವಯಸ್ಕರು ಮತ್ತು ಊರಿನ ಸದಸ್ಯರು ಸೇರಿ ಸಮುದಾಯದಲ್ಲಿರುವ ಸಂಪನ್ಮೂಲಗಳ ಕುರಿತು ಸಂಸ್ಥೆಯ ಸಹಯೋಗದೊಂದಿಗೆ ಜಾಗೃತಿ ಕಾರ್ಯಕ್ರಮ, ತರಬೇತಿ ಕಾರ್ಯಕ್ರಮಗಳನ್ನು ಕೈಗೊಳ್ಳತ್ತಾರೆ.

ಈ ರೀತಿಯಾಗಿ ಸಂಸ್ಥೆಗಳು ತಮ್ಮ ಕಾರ್ಯಕ್ರಮಗಳನ್ನು ಗ್ರಾಮ ಮಟ್ಟದಲ್ಲಿ, ಸಮುದಾಯ ಮಟ್ಟದಲ್ಲಿ, ನಿರ್ವಹಿಸುತ್ತವೆ ಮತ್ತು ಕೆಲವೊಂದು ಸಂಸ್ಥೆಗಳು ಈ ಮಾದರಿಯಲ್ಲಿ ಯಶಸ್ವಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ನಡೆಸಲು ಸಾಧ್ಯವಾಗುತ್ತಿಲ್ಲ.

# ಅಧ್ಯಾಯ– 4

## ಬುಡಕಟ್ಟು ಅಭಿವೃದ್ಧಿ ಮತ್ತು ಸ್ವಯಂ ಸೇವಾ ಸಂಸ್ಥೆಗಳು

ಅಭಿವೃದ್ಧಿ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ, ಅಭಿವೃದ್ಧಿ ಎಂಬ ಪ್ರಶ್ನೆ ಎತ್ತಿದಾಗಲೆಲ್ಲಾ ಅದರ ಹಿಂದೆ ಸ್ವಯಂ ಸೇವಾ ಸಂಸ್ಥೆ ಇದೆ ಎಂದು ತಿಳಿದು ಬರುತ್ತದೆ. ಇಂತಹ ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟು ಅಭಿವೃದ್ಧಿಗೋಸ್ಕರ ಯಾವ ಯಾವ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿದೆ. ಮತ್ತು ಕಾರ್ಯ ನಿರ್ವಹಿಸಬೇಕಾಗಿದೆ. ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯ ಸಂಗತಿಯಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ (80) ಎಂಬತ್ತು ಸ್ವಯಂ ಸೇವಾ ಸಂಘಗಳು ನೊಂದಾಯಿತವಾಗಿದ್ದು, ಅವುಗಳಲ್ಲಿ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಮಾತ್ರ ಪರಿಣಾಮಕಾರಿಯಾಗಿದ್ದು, ಅವುಗಳಲ್ಲಿ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಮಾತ್ರ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವುದು ಕಂಡುಬರುತ್ತದೆ. ಈ ಎನ್.ಜಿ.ಓ. ಗಳು ಮುಖ್ಯವಾಗಿ ಶಿಕ್ಷಣ, ಆರೋಗ್ಯ, ಬಾಲಕಾರ್ಮಿಕತೆ, ದೇವದಾಸಿ, ನಿರ್ಮೂಲನೆ, ಆರ್ಥಿಕ ಅಭಿವೃದ್ಧಿ ಈ ನಿಟ್ಟಿನಲ್ಲಿ, ಕಾರ್ಯ ನಿರ್ವಹಿಸುತ್ತದೆ. ಅವುಗಳನ್ನು ನಾವು ಈ ಕೆಳಗಿನಂತೆ ಕೂಲಕಂಕುಷವಾಗಿ ಚರ್ಚಿಸ ಬಹುದಾಗಿದೆ.

ಸ್ವಯಂ ಸೇವಾ ಕಲ್ಪನೆ ಮೂಲತಃ ವಿದೇಶಿ ಪ್ರಭಾವಾಗಿದ್ದರೂ ಬರಬರುತ್ತಾ ತಮ್ಮ ನೆಲೆಯನ್ನು ಕಂಡುಕೊಳ್ಳಲು ಕೆಲವೊಂದು ಎನ್.ಜಿ.ಓ.ಗಳು ನಿಸ್ವಾರ್ಥ ಸೇವೆಯನ್ನು ನೀಡುವಲ್ಲಿ ಮುಂದಾದವು.

### 4.1 ಶೈಕ್ಷಣಿಕ ಪ್ರಗತಿ

ಯಾವುದೇ ಒಂದು ಪ್ರದೇಶವನ್ನು ಆಯ್ಕೆ ಮಾಡಿಕೊಂಡರು ಅಲ್ಲಿ ಒಂದು ಕುಟುಂಬ, ಸಮುದಾಯ ಎಂದು ಪರಿಗಣಿಸಬೇಕಾಗುತ್ತದೆ. ಒಂದು ಸಮುದಾಯದಲ್ಲಿ, ಮಕ್ಕಳು, ವಯಸ್ಕರು, ವೃದ್ಧರು, ವಿಧವೆಯರು, ದೇವದಾಸಿಯರು, ಹೀಗೆ ಕೆಲವೊಂದು ವರ್ಗಗಳನ್ನು ಮಾಡುತ್ತೇವೆ. ಅಂಥಹ ವರ್ಗಗಳಿಗೆ ಈ ಸಂಸ್ಥೆಗಳಿಂದ ಎಷ್ಟರ ಮಟ್ಟಿಗೆ ಶೈಕ್ಷಣಿಕ ಪ್ರಗತಿಯಾಗಿದೇ ಎಂಬುದನ್ನು ತಿಳಿಯುವುದು ಅವಶ್ಯವಾಗಿದೆ.

ಮೊದಲಿಗೆ ಮಕ್ಕಳನ್ನು ಗಣನೆಗೆ ತೆಗೆದುಕೊಮಡು ನೋಡುವುದಾದರೆ

*** ಖಾಸಗಿ ಪೂರ್ವ ಪ್ರಾಥಮಿಕ ಶಾಲೆ:**

ಇದು ಸರ್ಕಾರೇತರ ಶಾಲೆಯಾಗಿದ್ದು ಈ ಶಾಲೆಯನ್ನು ಸಂಸ್ಥೆ ನೆಡೆಸಿಕೊಂಡು ಹೋಗುತ್ತಿರುತ್ತದೆ. ಹಳ್ಳಿಗಳಲ್ಲಿ ಯಾವ ಮಕ್ಕಳು ಸರಿಯಾಗಿ ಶಾಲೆಗೆ ಬರುವುದಿಲ್ಲವೋ ಅಂಥಹ ಮಕ್ಕಳನ್ನು ಗುರುತಿಸಿ ಅವರ ತಂದೆ ತಾಯಿಗೆ ಮನೆ ಒಲಸಿ ಅವರನ್ನು ಶಾಲೆಗೆ ಕರೆತಂದು ಅವರಿಗೆ ಮೂಲಭೂತ ಶಿಕ್ಷಣವನ್ನು ಕೊಡುವುದು ಈ ಸಂಸ್ಥೆಯ ಒಂದು ಕಾರ್ಯಕ್ರಮ ವಾಗಿರುತ್ತದೆ.

* ಸೇತುಬಂಧ ಶಾಲೆ:

ನಮ್ಮ ಬಳ್ಳಾರಿ ಜಿಲ್ಲೆಯು ಬಿಸಿಲಿನಿಂದ ಕೂಡಿದ್ದು ಇಲ್ಲಿ ಆಗಾಗ ಬರಗಾಲ ಸಾಧ್ಯತೆಗಳು ಹೆಚ್ಚು ಅದನ್ನು ನಿವಾರಿಸಿಕೊಳ್ಳಲು ಅಂದರೆ ಮನೆಯ ದುಡಿಮೆಯನ್ನು ಹೆಚ್ಚಿಗೆ ಮಾಡಿಕೊಳ್ಳಲು ನಮ್ಮಲ್ಲಿ ಮೈನಿಂಗ್ ಕೆಲಸಕ್ಕೆ ಹೋಗುವುದುಂಟು ಅತೀ ಹೆಚ್ಚು ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಕ್ಕಳು ಮತ್ತು ಪಾಲಕರು ದಿನವೆಲ್ಲಾ ಮೈನಿಂಗ್ ಕೆಲಸ ಮಾಡಲು ನಿರತರಾಗಿರುತ್ತಾರೆ. ಇಂಥಹ ಮಕ್ಕಳಿಗೆ ಅಂದರೆ ಶಾಲೆಯಿಂದ ಮತ್ತು ಶಿಕ್ಷಣದಿಂದ ವಂಚಿತರಾದ ಮಕ್ಕಳಿಗೆ ಮನಃ ಅವರಿಗೆ ಶಿಕ್ಷಣ ಕೊಡುವ ಉದ್ದೇಶದಿಂದ ಸೇತುಬಂದ ಶಾಲೆಯನ್ನು ತಯಾರಿಸಲಾಗುತ್ತದೆ. ಇಲ್ಲಿ ಆ ಮಕ್ಕಳ ಬುದ್ದಿಮಟ್ಟವನ್ನು ಅಳಿದು, ಅವರು ಯಾವ ತರಗತಿಯಿಂದ ಶಾಲೆ ಬಿಟ್ಟಿರುತ್ತಾರೆ ಎಂಬುದನ್ನು ಅರಿತು ಅವರಿಗೆ ಮಾನಸಿಕವಾಗಿ ಮತ್ತು ಶೈಕ್ಷಣಿಕವಾಗಿ ಪ್ರಬಲರನ್ನಾಗಿ ಮಾಡಲು 1 ವರ್ಷದ ವರೆಗೆ ಸೇತುಬಂದ ಶಾಲೆಯಲ್ಲಿ ಇರಿಸಿಕೊಂಡು ನಂತರ ಮುಖ್ಯವಾಹಿನಿ ಶಾಲೆಗೆ ದಾಖಲು ಮಾಡುತ್ತಾರೆ.

* ಪಾಲಕರ ತರಬೇತಿ ಕಾರ್ಯಕ್ರಮ :

ಪ್ರತಿಯೊಬ್ಬ ತಂದೆ ತಾಯಿಯು ತಮ್ಮ ಮಕ್ಕಳಿಗೆ ಜನ್ಮಕೊಟ್ಟರೆ ಸಾಲದು ಅವರು ನಿಭಾಯಿಸಬೇಕಾದ ಕರ್ತವ್ಯಗಳು ಹಲವು ಇರುತ್ತವೆ ಉದಾ: ಮಕ್ಕಳನ್ನು ಬೆಳೆಸುವ ಬಗೆ ಹೇಗೆ ಮತ್ತು ಅವರ ಶಿಕ್ಷಣದ ಕುರಿತು, ಮತ್ತು ಆರೋಗ್ಯದ ಕುರಿತು, ಮತ್ತು ಮನೆಯ ಪರಿಸರ ಮತ್ತು ಸುತ್ತಮುತ್ತಲಿನ ಪರಿಸರದ ಬಗ್ಗೆ ಈ ವಿಷಯಗಳ ಬಗ್ಗೆ ಸಂಸ್ಥೆಯವರು ಆಗಾಗ ಪಾಲಕರಿಗೂ ಮತ್ತೂ ಪೋಷಕರಿಗೂ ತರಬೇತಿಯನ್ನು ನೀಡುತ್ತಾರೆ.

* ಶಾಲಾ ಉಸ್ತುವಾರಿ ಮತ್ತು ಮೇಲ್ವಿಚಾರಣ ಸಮಿತಿ ಸದಸ್ಯರಿಗೆ:

ತರಬೇತಿ ಕಾರ್ಯಕ್ರಮ ಪ್ರತಿಯೊಂದು ಶಾಲೆಯಲ್ಲಿಯೂ ಶಾಲಾ ಉಸ್ತುವಾರಿ ಮತ್ತು ಮೇಲ್ವಿಚಾರಣ ಸಮಿತಿಯನ್ನು ಮಾಡಿದ್ದಾರೆ. ಇವರಿಗೆ ಸ್ವಯಂ ಸೇವಾ ಸಂಸ್ಥೆಗಳು ಅವರ ಜವಾಬ್ದಾರಿಗಳ ಕುರಿತು ಕಾರ್ಯಗಾರಗಳನ್ನು, ತರಬೇತಿಗಳನ್ನು ಹಮ್ಮಿಕೊಳ್ಳುತ್ತವೆ. ಉದಾ: ಶಾಲೆಗೆ ಗೈರು ಹಾಜರು ಆಗುತ್ತಿದ್ದ ಮಕ್ಕಳ ಮತ್ತು ಶಿಕ್ಷಕರ ಕುರಿತು ವಿಚಾರಣೆ ಕೈಗೊಳ್ಳುವುದು ಮತ್ತು ಬಿಸಿಯೂಟ ಕಾರ್ಯಕ್ರಮ ಸರಿಯಾಗಿ ನಡೆಯುತ್ತಿದೆಯೋ ಇಲ್ಲವೋ ಎಂದು ತಿಳಿದು ಅದನ್ನು ಸರಿಪಡಿಸುವುದು ಮತ್ತು ಶಾಲೆಯ ಅಭಿವೃದ್ಧಿಗೋಸ್ಕರ ಕಟ್ಟಡಗಳನ್ನು ನಿರ್ಮಿಸುತ್ತಿದ್ದರೆ ಅವುಗಳ ಮೇಲ್ವಿಚಾರಣೆಯನ್ನು ವಹಿಸುವುದು ಮತ್ತು ಅವ್ಯವಹಾರ ನಡೆಯದಂತೆ ಎಚ್ಚರ ವಹಿಸುವುದು, ಇದೆಲ್ಲದುದರ ಮಧ್ಯೆ ಸಮಿತಿ ಸದಸ್ಯನಾದ ಮಾತ್ರಕ್ಕೆ ಸಿಕ್ಕವರ ಮೇಲೆ ಸಿಟ್ಟುಮಾಡಿಕೊಳ್ಳದೆ ಸೌಜನ್ಯದಿಂದ ವರ್ತಿಸಿ ಅಭಿವೃದ್ಧಿಯ ಸಲುವಾಗಿ ಏನು ಅವಶ್ಯವೋ ಅದನ್ನು ಮಾಡುವಂತೆ ತರಬೇತಿ ಮಾಡಲಾಗುವುತ್ತದೆ.

* **ಶಿಕ್ಷಕರನ್ನು ಒದಗಿಸುವುದು:**

ಸರ್ಕಾರಿ ಶಾಲೆಗಳಲ್ಲಿ ಮಿತಿ ಮೀರಿದ ವಿದ್ಯಾರ್ಥಿಗಳ ಸಂಖ್ಯೆ ಇರುತ್ತದೆ ಈಗಿನ ಪರಿಸ್ಥಿತಿಯಲ್ಲಿ ಸರಿಸುಮಾರಿಗೆ ಒಟ್ಟು ಶಿಕ್ಷಣ ಬಂದು ನೂರು ಮಕ್ಕಳನ್ನು ನಿಭಾಯಿಸ ಬೇಕಾಗುತ್ತದೆ. ಅಂತದರಲ್ಲಿ, ಸಂಪೂರ್ಣವಾಗಿ ಕಲಿಸುವುದು ಅಸಾದ್ಯದ ಸಂಗತಿಯೇ ಸರಿ. ಈ ವ್ಯವಸ್ಥೆಯನ್ನು ಗಮನಿಸಿ ಕೆಲವೊಂದು ಸಂಸ್ಥೆಗಳು ಸರ್ಕಾರಿ ಶಾಲೆಗಳ ಗಣಿತ, ಇಂಗ್ಲೀಷ್ ಮತ್ತು ವಿಜ್ಞಾನದ ಶಿಕ್ಷಕರನ್ನು ನೇಮಿಸಿ ಸ್ವಲ್ಪ ಮಟ್ಟಿಗೆ ಆಸರೆಯಾದ ಉದಾಹರಣೆಗಳನ್ನು ಕೂಡಕಾಣಬಹುದಾಗಿದೆ.

* **ರಾತ್ರಿ ಶಾಲೆ ಶಿಕ್ಷಣ:**

ಇಂದಿನ ಮಕ್ಕಳೇ ನಾಳಿನ ಪ್ರಜೆಗಳು ಎಂಬ ನಾಣ್ನುಡಿಯನ್ನು ಹೇಳುತ್ತೇವೆ ಆದರೆ ಕೆಲವೊಂದು ಮಕ್ಕಳಿಗೆ ಸರಿಯಾದ ರೀತಿಯ ಶೈಕ್ಷಣಿಕ ಬುನಾದಿಯೇ ಬಿದ್ದಿರುವುದಿಲ್ಲ ಅವರು ಬಾಲ್ಯದಲ್ಲಿ ತಮ್ಮ ಸೋಮಾರಿತನದಿಂದಲೋ ಅಥವಾ ಪಾಲಕ ಮತ್ತು ಪೋಷಕರ ಅಸಡ್ಯೆದಿಂದಲೋ ಶಿಕ್ಷಣದಿಂದ ವಂಚಿತವಾಗಿ ಬಂದಿರುತ್ತಾರೆ. ಅಂತವರನ್ನು ಕೆಲವೊಂದು ಸಂಸ್ಥೆಗಳು ಗುರುತಿಸಿ, ಅವರಿಗೆ ವಯಸ್ಕರ ಶಿಕ್ಷಣವನ್ನು ಅದೇ ರೀತಿಯಾಗಿ ಬಾಲ್ಯದಲ್ಲಿಯೂ ಕಲಿಯಲಾಗದೇ ಹೆಣ್ಣು ಎಂಬ ಕೀಳರಿಮೆಯಿಂದ ಶಿಕ್ಷಣದಿಂದ ದೂರ ಉಳಿಸಿರುತ್ತಾರೆ. ಅಂತವರು ಮುಂದೆ ಬರಲೆಂಬ ಉದ್ದೇಶದಿಂದ ಅವರಿಗೋಸ್ಕರ ಸ್ವಸಹಾಯ ಸಂಘಗಳನ್ನು ರಚಿಸಿ ಅವರಿಗೆ ಹಲವು ಅಭಿವೃದ್ಧಿಯ ಜೊತೆಗೆ ಶೈಕ್ಷಣಿಕ ಅಭಿವೃದ್ಧಿ ಮಾಡಲು ರಾತ್ರಿ ಶಾಲೆಗಳನ್ನು ತೆರೆಯಲಾಗಿದೆ.

* **ಕರ್ನಾಟಕ ರಾಜ್ಯ ಸಾಕ್ಷರತ ಮಿಶಿನ್ ಪ್ರಾಧಿಕಾರ :**

ಕರ್ನಾಟಕ ರಾಜ್ಯ ಸಾಕ್ಷರತ ಮಿಶನ್ ಪ್ರಾಧಿಕಾರವು ಸರಳ ಮಾರ್ಗದಲ್ಲಿ ಪ್ರತಿಯೊಬ್ಬರಿಗೂ ಅಕ್ಷರ ಕಲಿಸುವ ಉದ್ದೇಶದಿಂದ ಸಾಕ್ಷತ ಸಂಗಾತಿ ಎಂಬ ಪಠ್ಯವನ್ನು ಬಿಡುಗಡೆ ಮಾಡಿ ಸ್ವಯಂ ಸೇವಾ ಸಂಘಗಳ ಮೂಲಕ ಹಳ್ಳಿಯ ಜನರಿಗೆ ಅಕ್ಷರ ದಾಸೋಹ ವನ್ನು ಊಟಬಡಿಸಲೆಂದು ಪ್ರಯತ್ನಿಸುತ್ತಿದೆ. ಈ ಒಂದು ಯೋಜನೆಯನ್ನು ಸಂಸ್ಥೆಯ ಪರಿಣಾಮಕಾರಿಯಾಗಿ ಅನ್ವಯಿಸುತ್ತದೆ.

* **ಮೂಲಭೂತ ಶಿಕ್ಷಣ :**

ಈ ಒಂದು ಕಾರ್ಯಕ್ರಮದಡಿಯಲ್ಲಿ, ಮಕ್ಕಳಿಗೆ ಶಿಕ್ಷಣ ಬೇಜಾರಾಗಬಾರದೆಂದು ಆಟ ಸಾಮಾನುಗಳನ್ನು ಕೊಡಲಾಗಿದೆ. ಉದಾ: ಚಾರು ಬಂಡಿ, ದಡಂ, ದಂಡಕಿ, ಗುಂಡಿನ ಪಾಟೆ, ಮತ್ತು ಅನೇಕ ಬಿತ್ತಿ ಚಿತ್ರಗಳ ಚಾರ್ಟ್‌ಗಳನ್ನು ಕೊಡಲಾಗಿದೆ. ಈ ರೀತಿಯ ಪ್ರತಿಯೊಂದು ಸಹಕಾರವನ್ನು ಕೊಟ್ಟು ಶಿಕ್ಷಣ ಪ್ರಗತಿ ಆಗುವಂತೆ ಮಾಡುತ್ತದೆ.

ಒಟ್ಟಾರೆಯಾಗಿ ಬೆಳರಣಿಕೆಯ ಸಂಸ್ಥೆಗಳನ್ನು ಬಿಟ್ಟರೆ ಯಾವಂದು ಸಂಸ್ಥೆಯು ಸಜ್ಜಿತ ಜಿನ, ಹಾಗೂ ಜನಾಂಗದವರಿಗೆ ಕಾಯರ ಮಾಡುತ್ತಿಲ್ಲ, ಸಂಸ್ಥೆಗಳ ಮುಖ್ಯ ಉದ್ದೇಶ ಮತ್ತು ಗುರಿಯಾದ ತಾರತಮ್ಯ ಜಾತಿಬೇದ ಇಲ್ಲದೆ ಕೆಲಸ ನಿರ್ವಹಿಸುತ್ತವೆ. ಮತ್ತು ಒಟ್ಟಾರೆಯಾಗಿ ಶೈಕ್ಷಣಿಕ ಪ್ರಗತಿ ಎಂದರೆ ಮಗು, ವಯಸ್ಕ, ವಿಧವೆ, ವೃದ್ಧ, ದೇವದಾಸಿ ಯಾರೇ ಆಗಿರಲಿ ಅವರು ಆರ್ಥಿಕವಾಗಿ ಸಾಮಾಜಿಕವಾಗಿ ಮುಂದುವರಿಯ ಬೇಕಾದರೆ ಅವರಿಗೆ ಶಿಕ್ಷಣ ಅತೀ ಅವಶ್ಯವಾಗಿಬೇಕು ಅಂತಹ ಶಿಕ್ಷಣದ ಪ್ರಕ್ರಿಯೆಯನ್ನು ನೆವು ಮೇಲಿನಂತೆ ಗಮನಿಸಬಹುದಾಗಿದೆ ಮತ್ತು ಇದೇ ರೀತಿ ಒಳ್ಳೊಳ್ಳೆ ಕೆಲಸ ಮಾಡುತ್ತಾ ಹೋದಲ್ಲಿ ಶಿಕ್ಷಣ ಪ್ರಗತಿ ಹೊಂದುವುದರಲ್ಲಿ ಅನುಮಾನವಿಲ್ಲ.

## 4.2 ಆರೋಗ್ಯದ ಬಗ್ಗೆ ಜಾಗೃತಿ:

ಸ್ವಯಂ ಸೇವಾ ಸಂಸ್ಥೆಗಳಿಗೂ ಮತ್ತು ಸಮಾಜ ಸೇವೆಗೂ ಬಹಳ ಅವಿನಾಭಾವ ಸಂಬಂಧವಿದೆ ಹೇಗೆಂದರೆ ಒಂದೊಂದು ಸಂಸ್ಥೆಯು ಒಂದೊಂದು ಉದ್ದೇಶವನ್ನಿಟ್ಟು ಕೊಂಡಿರುತ್ತದೆ. ಅದರಲ್ಲೂ (ಆರೋಗ್ಯದ ಬಗ್ಗೆ) ಮನುಷ್ಯ ತನ್ನ ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಮಹಾದಾಸೆಯನ್ನು ಹೊಂದಿದ್ದರೆ ಆರೋಗ್ಯವಂತನಾಗಿರಬೇಕು ಅದಕ್ಕೋಸ್ಕರನೇ ಒಂದು ಗಾದೆ ಇದೆ "ಆರೋಗ್ಯವೇ ಮಹಾಭಾಗ್ಯ" ಎಮದು ಹಾಗೂ ಪ್ರತಿಯೊಂದು ಸಂಸ್ಥೆ ಏನೆಲ್ಲಾ ಬೇರೆ ಬೇರೆ ಉದ್ದೇಶಗಳಿದ್ದರೂ ಪ್ರಮುಖವಾಗಿ ಆರೋಗ್ಯಕ್ಕೆ ಸಂಬಂಧಿಸಿದ ಹಾಗೇ ಅನೇಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತ ಹೋಗುತ್ತದೆ. ಉದಾ:- ಸಮುದಾಯದಲ್ಲಿ ಉಚಿತ ಆರೋಗ್ಯ ತಪಾಸಣಾ ಶಿಬಿರ, ನೇತ್ರದಾನ ಶಿಬಿರ, ಉಚಿತ ಹೃದಯ ತಪಸಣಾ ಶಿಬಿರ, ಹೀಗೇ ಮತ್ತು ಹೆಚ್.ಐ.ವಿ. /ಏಡ್ಸ್ ಗೆ ಸಂಬಂಧಿಸಿದ ಹಾಗೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಇತರೆ ಯಾವೊಂದು ಕಾಯಿಲೆಗಳೂ ಸಹ ಸಾಮಾನ್ಯ ಯಾವುದೇ ಜನಗಳಿಗೂ ಬಾರದೆ ಇರುವಂತೆ ನೋಡಿಕೊಳ್ಳುವ ಒಂದು ದೃಷ್ಟಿಯಿಂದ ಮಕ್ಕಳಿಗೆ ಯುವಕರಿಗೆ ಮಹಿಳೆಯರಿಗೆ ಹಾಗೂ ವೃದ್ಯಾಪ್ಯ ವಯಸ್ಕರಿಗೆ ಬೇರೆ ಬೇರೆ ವರ್ಗಕ್ಕೆ ವಿಭಾಗಗಳನ್ನು ಮಾಡಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಇಂದು ಸ್ವಯಂ ಸೇವಾ ಸಂಸ್ಥೆಗಳು ಸೇವಾ ಮನೋಭಾವನೆಯಿಂದ ಸೇವೆಯನ್ನು ಸಲ್ಲಿಸುತ್ತಿದೆ.

ಹಾಗೆಯೇ ಈ ಒಂದು ಆರೋಗ್ಯಕ್ಕೆ ಸಂಬಂಧಿಸಿದ ಹಾಗೇ ಬೇರೆ, ಬೇರೆ, ರೀತಿಯಲ್ಲಿ ಜಾಗೃತಿಯನ್ನು ಸ್ವಯಂ ಸೇವಾ ಸಂಸ್ಥೆಗಳು ಕೈಗೊಳ್ಳುತ್ತೇವೆ ಯಾವರೀತಿ ಎಂದರೆ

### ಗ್ರಾಮೀಣ ಆರೋಗ್ಯ:

ಸ್ವಯಂ ಸೇವಾ ಸಂಸ್ಥೆಗಳು ಈ ಒಂದು ವಿಚಾರಕ್ಕೆ ಸಂಬಂಧಿಸಿದ ಹಾಗೆ ಯಾವ ರೀತಿ ಸಂಪೂರ್ಣವಾಗಿ ಜಾಗೃತಿ ಮೂಡಿಸುತ್ತದೆ. ಎಂದರೆ ಆರೋಗ್ಯವೆನ್ನುವುದು ಸಂಪೂರ್ಣವಾದ ದೈಹಿಕ

ಮತ್ತು ಮಾನಸಿಕ ಸಂತುಲತೆ ಹೊಂದುವುದು ಎಂದು ಅರ್ಥಮಾಡಿಕೊಳ್ಳಬೇಕು. ಈ ಎರಡರಲ್ಲಿ ಯಾವುದಾದರೊಂದಕ್ಕೆ ಲೋಪ ಉಂಟಾದಲ್ಲಿ ವ್ಯಕ್ತಿಯ ಒಟ್ಟು ಜೀವನಕ್ರಮಕ್ಕೆ ಧಕ್ಕೆ ಉಂಟಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಜನರು ಆರೋಗ್ಯವಂತರಾಗಿರಲು ಬಯಸುತ್ತಾರೆ. ಆದರೆ ಅನಾರೋಗ್ಯಕ್ಕೆ ತುತ್ತಾದಾಗ ಅದರ ಪ್ರಮುಖ ಕಾರಣಗಳನ್ನು ಗುರುತಿಸದೆ ಔಷಧಿ ಸೇವನೆಯಿಂದ ಗುಣಮುಖರಾಗಲು ಪ್ರಯತ್ನಿಸುತ್ತಾರೆ. ಅಂಥವರಿಗೆ ಸ್ವಯಂ ಸೇವಾ ಸಂಸ್ಥೆಗಳು ಆರೋಗ್ಯದ ಯಥಾಸ್ಥಿತಿಯನ್ನು ಕಾಪಾಡಿಕೊಳ್ಳಲು ರಕ್ಷಿತ, ಶುಭ್ರ, ಸ್ವಚ್ಛ ಕುಡಿಯುವ ನೀರು ಕುಡಿವಂತೆ, ಪೋಷಕ ಅಂಶಗಳನ್ನು ಆಹಾರ ತೆಗೆದುಕೊಳ್ಳುವಂತೆ ದಿನನಿತ್ಯ ನಿಯಮವಾಗಿ ದೈಹಿಕ ಸ್ವಚ್ಛತೆ ಇರುವಂತೆ, ನಿರ್ದಿಷ್ಟ ಸೋಂಕುಗಳಿಗೆ ಪ್ರತಿರೋಧಕ ಔಷದಿಗಳ/ ಚುಚ್ಚು ಮದ್ದುಗಳನ್ನು ಸೇವನೆ ಮಾಡುವಂತೆ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಚವಾಗಿಟ್ಟುಕೊಳ್ಳುವಂತೆ.

**ಹೆಚ್.ಐ.ವಿ./ಏಡ್ಸ್ : ವಾಸ್ತವಾಂಶಗಳ ಬಗ್ಗೆ:**

ಇಂದು ಸಮಾಜದಲ್ಲಿ ಮಾರಕವಾಗಿರುವ ರೋಗವೆಂದರೆ ಈ ಒಂದು ಹೆಚ್.ಐ.ವಿ. /ಏಡ್ಸ್ ಇದರ ಬಗ್ಗೆ ಸ್ವಯಂ ಸೇವಾ ಸಂಸ್ಥೆಗಳು ಬೀದಿನಾಟಕಗಳ ಮೂಲಕ ಜಾಗೃತಿ ಮೂಡಿಸುವುದು ಕಾಂಡೋಮ್ ಬಳಸುವುದರ ಮೂಲಕ ಏಡ್ಸ ಬಾರದಂತೆ ತಡೆಗಟ್ಟುವುದು ಸಾಧ್ಯ ಎಂದು ಜಾಗೃತಿ ಮೂಡಿಸಲು ರ್‍ಯಾಲಿ ನಡೆಸುವುದು. ಆರೋಗ್ಯ ಇಲಾಖೆಗಳ ಮುಖಾಂತರ ಮತ್ತು ಜಿಲ್ಲಾ ಪಂಚಾಯಿತಿಗಳ ಸಂಯುಕ್ತಾಶ್ರಯದಲ್ಲಿ ಜಾಗೃತಿ ಮೂಡಿಸುವಂತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಕರ್ನಾಟಕದ ಏಡ್ಸ್ ಪ್ರಿವೆನ್ಷನ್ ಸೊಸೈಟಿಯಿಂದ ನಡೆಸುತ್ತಿರುವ ಆಪ್ತ ಸಮಾಲೋಚನ ಕೇಂದ್ರಗಳಿಗೆ ರೆಫರ್ ಮಾಡುವುದು ಏಡ್ಸ್ ಬಂದಿರುವಂತೆ ರೋಗಿಗಳಿಗೆ ಆರ್ಟ್ ಕೇಂದ್ರಗಳಿಗೆ ಕಳಿಸಿಕೊಡುವುದು ಮತ್ತು ಸ್ವಯಂ ಸೇವೆಗಳ ಸಂಯುಕ್ತಾಶ್ರಯದಲ್ಲಿ ಈಗಾಗಲೇ ರೋಗಬಂದಿರುವಂತ ವ್ಯಕ್ತಿಗಳಿಗೆ ವಸತಿ ನಿಲಯಗಳನ್ನು ನಿರ್ಮಿಸಿ ಪುನರ್ವಸತಿ ಕಲ್ಪಿಸಿಕೊಡುವಂತಹ ದೊಡ್ಡ ಕೆಲಸಗಳಿಗೆ ಕೈ ಹಾಕಿದೆ ಎಂದು ನನ್ನ ಅಭಿಪ್ರಾಯ.

**ಮಧ್ಯಪಾನ ಸಮಸ್ಯೆಯ ಬಗ್ಗೆ ಜಾಗೃತಿ :**

ಇಂದು ಜಗತ್ತಿನಲ್ಲಿ ಅನೇಕರು ಮಧ್ಯಪಾನವನ್ನು ಮಾಡಿ ತಮ್ಮ ಮನೆಗಳನ್ನು ಹಾಗೂ ಕುಟುಂಬದವರನ್ನು ಬೀದಿಗೆ ತಂದು ನಿಲ್ಲಿಸಿದಂತಹ ಹೃದಯ ವಿದ್ರವಕ ಘಟನೆಗಳನ್ನು ನಾವು ನೋಡಬಹುದು ಆದರೆ ಇಂತಹ ಘಟನೆಗಳು ಸಮಾಜದಲ್ಲಿ ನಡೆಯಬಾರದು ಎನ್ನುವ ಮಾನವೀಯ ದೃಷ್ಠಿಕೋನದಿಂದ ಸೇವೆಯನ್ನು ಮುಡಿಪಾಗಿಟ್ಟಿರುವ ಕೆಲವೊಂದು ಸ್ವಯಂ –ಸೇವಾಸಂಸ್ಥೆಗಳು ಉದಾ: ಶಕ್ತಿ ಅಸೋಷಿಯೇಷನ್ ಹರಿಹರ ಇನ್ನಿತ್ಯ ಕೆಲವೊಂದು ಸಂಸ್ಥೆಗಳು ಮಧ್ಯಪಾನವನ್ನು

ಮಾಡುವಂತಹವರಿಗೆ ಮನರ್ವಸತಿಕ ಕಲ್ಪಿಸಿ ಒಂದು ತಿಂಗಳವರೆಗೆ ತಮ್ಮ ಸಂಸ್ಥೆಗಳಲ್ಲಿ ಉಚಿತವಾದ ಯಾವ ವಸತಿ ಯೋಗ, ಧ್ಯಾನ ಪ್ರಾರ್ಥನೆ ಮತ್ತು ಉಚಿತವಾದ ಉಪನ್ಯಾಸಗಳನ್ನು ನೀಡುವುದರ ಮುಖಾಂತರ ಎಷ್ಟೇ ಕುಟುಂಬಗಳನ್ನು ಸಮಾಜದಲ್ಲಿ ಗೌರವದಿಂದ ಕಾಣುವಂತೆ ಮಾಡಿದ ನಿದರ್ಶನಗಳನ್ನು ಇವೆ ಆ ಎಲ್ಲ ಗೌರವಗಳು ಇಂತಹ ಅನೇಕ ಸ್ವಯಂ ಸೇವಾ ಸಂಸ್ಥೆಗಳಿಗೆ ಸಲ್ಲುತ್ತದೆ.

**ವೈಯುಕ್ತಿಕ ಶುಚಿತ್ವ ಮತ್ತು ಕುಡಿಯುವ ನೀರಿನ ಬಗ್ಗೆ:**

ಸ್ವಯಂ ಸೇವಾ ಸಂಸ್ಥೆಗಳು ಬೇರೆ ಬೇರೆ ಕಡೆ ಗಮನ ಹರಿಸುವಂತೆ ಈ ಒಂದು ವೈಯುಕ್ತಿಕ ಶುಚಿತ್ವಕ್ಕೂ ಸಹ ಕೇಂದ್ರಿಕರಿಸಿ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. ಯಾವ ರೀತಿ ಎಂದರೆ ಮನುಷ್ಯ ಅದರಲ್ಲೂ ಈ ಬಳ್ಳಾರಿ ಜಿಲ್ಲೆಯಲ್ಲಿ ಬಿಸಿಲಿನ ದಣೆ ಒಂದು ಅದರಲ್ಲೂ ಮೈನ್ಸ್ ವಿಭಾಗ ಆಗಿರುವುದಿರಂದ ದೂಳಿನಿಂದ ಕೂಡಿರುವಂತ ಪ್ರದೇಶ ಈ ಒಂದು ಧೂಳು ಮತ್ತು ಬಿಸಿಲಿನಲ್ಲಿ ಕೆಲಸ ಮಡಿಕ ಹಾಗೆ ಏನಾದರೂ ವೈಯುಕ್ತಿಕವಾಗಿ ಸ್ವಚ್ಛತೆ ಇಂದ ಇರದೆ ಹೋದರೆ ಮನುಷ್ಯನಿಗೆ ಅನೇಕ ರೋಗಗಳು ಹರಡುತ್ತವೆ ಉದಾ:- ಧಮ್ಮು ಕೆಮ್ಮು ಈ ರೋಗಗಳ ಬಾರದಂತೆ ತಡೆಗಟ್ಟಲು ಸ್ವಯಂ ಸೇವಾ ಸಂಸ್ಥೆಗಳು ಆರೋಗ್ಯ ಇಲಾಖೆಯ ಸಹಕಾರದಿಂದ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ವೈಯುಕ್ತಿಕ ಶುಚಿತ್ವದ ಕಡೆಗೆ ಗಮನ ಹರಿಸುತ್ತವೆ ಹಾಗೆಯೇ ಕುಡಿಯುವ ನೀರಿನ ಬಗ್ಗೆ ಸಹ ಜಾಗೃತಿ ವಹಿಸುತ್ತದೆ. ಉದಾಹರಣೆಗೆ ಕುಡಿಯವ ನೀರೇನಾದರೂ ಇತರೆ ರೋಗಗಳು ಬರುವ ಸಾಧ್ಯತೆ ಇರುತ್ತದೆ ಅದಕ್ಕೋಸ್ಕರ ಈ ಒಂದು ಕಾಯಿಲೆಗಳು ಬಾರದೆ ಹಾಗೆ ನೋಡಿಕೊಳ್ಳುವಂತ ಸಾಮಾಜಿಕ ಹೊಣೆಯನ್ನು ಸ್ವಯಂ ಸೇವಾ ಸಂಸ್ಥೆಗಳು ಮಾಡುತ್ತವೆ ಎಂದು ಹೇಳುವಹುದು.

**ಮಕ್ಕಳ ಆರೋಗ್ಯದ ಬಗ್ಗೆ ಶಿಬಿರಗಳನ್ನು ನಡೆಸುವುದು:**

ಏನೂ ಅರಿಯದ ಮುಗ್ದ ಶಾಲಾ ಮಕ್ಕಳಿಗೆ ನಮಗೇನು ರೋಗಗಳು ಅಥವಾ ಖಾಯಿಲೆಗಳು ಬಂದಿವೆಯನ್ನುವ ಅರಿವು ಸಹ ಇರುವುದಿಲ್ಲ ಅಂತಹ ಎಷ್ಟೇ ಮಕ್ಕಳಿಗೆ ಆರೋಗ್ಯದ ಬಗ್ಗೆ ತಿಳಿಸುವಂತ ಶಿಬಿರವನ್ನು ಸ್ವಯಂ ಸೇವಾ ಸಂಸ್ಥೆಗಳು ಹಮ್ಮಿಕೊಳ್ಳುತ್ತವೆ. ಹಾಗೆಯೇ ಇದರ ಉಪಯೋಗವೇನೆಂದರೆ, ಎಷ್ಟು ಮಕ್ಕಳಿಗೆ ಹೃದಯಕ್ಕೆ ಸಂಬಂಧಿಸಿದ ಖಾಯಿಲೆಗಳು ಇನ್ನಿತರ ರೋಗಗಳು ಬಂದಿರುವಂತ ಮಾಹಿತಿ ಸಿಗುತ್ತದೆ. ಇದರಿಂದ ತೆಗೆದುಕೊಳ್ಳಬೇಕಾದ ಕ್ರಮಕ್ಕೆ ಅನುಕೂಲವಾಗುವಂತಹ ಸೇವೆಗಳನ್ನು ಸಲ್ಲಿಸುತ್ತವೆ. 5 ಸ್ವಯಂ ಸೇವಾ ಸಂಸ್ಥೆಗಳು.

**ಸಮುದಾಯ ಆರೋಗ್ಯದ ಶಿಬಿರಗಳನ್ನು ನಡೆಸುತ್ತವೆ:**

ಸಮುದಾಯದಲ್ಲಿ ಅನೇಕ ಆರೋಗ್ಯ ಶಿಬಿರಗಳನ್ನು ಸ್ವಯಂ ಸೇವಾ ಸಂಸ್ಥೆಗಳು ಹಮ್ಮಿಕೊಳ್ಳುತ್ತವೆ. ಈ ಒಂದು ಶಿಬಿರಗಳನ್ನು ಹಮ್ಮಿಕೊಳ್ಳಬೇಕಾದರೆ ತಜ್ಞವೈದ್ಯರನ್ನು ಕರೆಯಿಸಿ ಉದಾ:- ಸ್ತ್ರೀ ರೋಗ ತಜ್ಞರು , ಮಕ್ಕಳ ತಜ್ಞರು, ಇನ್ನಿತರ ತಜ್ಞ ವೈದ್ಯರುಗಳನ್ನು ಕರೆಯಿಸಿ ಉಚಿತವಾದ

ಮೆಡಿಸಿನ್ಸ್ ಕೊಡುವುದಾದರೆ ಅನೇಕ ಜನಗಳಿಗೆ ಅನುಕೂಲವಾಗುವಂತ ಕೆಲಸವನ್ನು ಸ್ವಯಂ ಸೇವಾಸಂಸ್ಥೆಗಳು ಮಾಡುತ್ತವೆ ಎಂದು ಹೇಳಬಹುದಾಗಿದೆ.

ದೇವದಾಸಿ ಆಚರಣೆ ಕುರಿತು ಜಾಗೃತಿ:

ದೇವದಾಸಿ ಪದ್ಧತಿ ನಮ್ಮ ದೇಶದಲ್ಲಿ ಮತ್ತು ರಾಜ್ಯದಲ್ಲಿ ಒಂದು ಜ್ವಾಲಾಂತ ಸಮಸ್ಯೆಯಾಗಿದೆ. ಈ ಒಂದು ಸಮಸ್ಯೆಯ ನಿವಾರಣೆಗೋಸ್ಕರ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಸತತ ಪರಿಶ್ರಮ ಪಡುತ್ತಿವೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಕೆಲವೊಂದು ಕಡೆ ಅತೀ ಹೆಚ್ಚಾಗಿ ಈ ಆಚರಣೆಗಳು ಕಂಡು ಬರುತ್ತವೆ. ಮುಖ್ಯವಾಗಿ ಬೆಳಗಾವಿ ಜಿಲ್ಲೆಯ ಸೌದತ್ತಿ ಎಂಬಲ್ಲಿಗೆ ಈ ದೇವದಾಸಿಯರು ತಮ್ಮ ಆಚರಣೆಗಳನ್ನು ಸಲ್ಲಿಸುತ್ತಾರೆ. ಅಂದರೆ ಈ ದೇವಿಯ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಬಿಡುವನ್ನು ಸಲ್ಲಿಸುತ್ತಾರೆ ಅಂದರೆ ಈ ದೇವಿಯ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಬಿಡುವುದು.

- ದೇವದಾಸಿಯರ ಲಕ್ಷಣಗಳು:
- 18 ವರ್ಷಕ್ಕೂ ಮುಂಚೆಯೇ ಅವರನ್ನು ನೀನು ಯಲ್ಲಮ್ಮನಿಗೆ ಮೀಸಲು ಎಂದು ಅವಲ ಮನಸ್ಸಿನಲ್ಲಿ ಬೇರೂರುವಂತೆ ಮಾಡುವುದು.
- ಈ ದೇವದಾಸಿ ಹೆಣ್ಣ ಮಕ್ಕಳು ಮದುವೆ ಯಾಗುವಂತಿಲ್ಲ.
- ಈ ದೇವದಾಸಿಯರು ಯಾರಾದರೂ ಗಂಡಸರ ಸಹವಾಸ ಮಾಡಬಹುದು ತಾತ್ಕಾಲಿಕವಾಗಿ ಅವರನ್ನೇ ಅಪ್ಪ ಎಂದು ಹೇಳಿಕೊಳ್ಳುತ್ತಾರೆ.
- ಇವರು ಮದುವೆ ಯಾಗದಿದ್ದರೂ ತಾಳಿಯನ್ನು ಕಟ್ಟಿ ಕೊಳ್ಳುತ್ತಾರೆ.
- ಇವರು ಯಾವುದೇ ಕೆಲಸಕ್ಕೆ ಹೋಗದೇ ಭಿಕ್ಷೆ ಕೇಳಿ ಅಮಾನ ಪವಾಡಗಳನ್ನು ಹೇಳಿ ಹಣ ಕೇಳುತಾರೆ.

ಮತ್ತು ಹಣ ಸಾಲದಿದ್ದ ಪಕ್ಷದಲ್ಲಿ ವೇಶ್ಯವಾಟಿಕೆಗೆ ಇಳಿಯುತ್ತಾರೆ.

- ಇವರು ದೇವರನ್ನು ಹೊತ್ತು ತಿರುಗುತ್ತಾರೆ.

ಈ ಮೇಲಿನ ರೀತಿಯ ಲಕ್ಷಣಗಳನ್ನು ಹೊಂದಿರುತ್ತಾರೆ ಇದರಿಂದ ಸಮಾಜಕ್ಕೆ ಒಳ್ಳೆಯದಲ್ಲಾ ಎಂಬ ಉದ್ದೇಶದಿಂದ ಈ ರೀತಿಯ ಸಂಸ್ಕೃತಿಯನ್ನು ಪಾಲಿಸುವ ಜನರು ಕಡ್ಡಾಯವಾಗಿ ಮನೆಗೆ ಒಬ್ಬರು ಅಥವಾ ಇಬ್ಬರನ್ನು ದೇವದಾಸಿಗೆ ಬಿಡುವ ಪದ್ಧತಿ ಇರುವುದರಿಂದ ಇದನ್ನು ಹೋಗಲಾಡಿಸುವ ಸಲುವಾಗಿ ನಮ್ಮ ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ದೇವದಾಸಿ ನಿರ್ಮೂಲನೆ ಕುರಿತು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿವೆ.

ಈ ಕೆಳಗಿನ ರೀತಿಯಲ್ಲಿ ಅವರಿಗೆ ಯಾವ ಕ್ಷೇತ್ರದಲ್ಲಿ ಸಬಲರಾಗಲು ಸಾಧ್ಯವೋ ಅಂತ ಕ್ಷೇತ್ರಗಳಲ್ಲಿ ತರಬೇತಿ ಮತ್ತು ಪ್ರೋತ್ಸಾಹ ನೀಡಿದ್ದರೂ ಇದುವರೆಗೂ ಸಂಪೂರ್ಣವಾಗಿ ಸುಧಾರಿಸಲಾಗಿಲ್ಲ.

ನಮ್ಮ ಸಮಾಜ ಎಂದರೆ ಒಂದೇ ರೀತಿಯ ಸಾಮಾಜಿಕ ವರ್ತನೆ ಸಮಾಜಿಕ ಸಂಬಂಧಗಳನ್ನೊಳಗೊಂಡ ಕುಟುಂಬಗಳ ಒಟ್ಟು ಸಮೂಹ, ನಮ್ಮದು ವಿವಿಧತೆ ಪ್ರೀತಿಯಿಂದ ಬದುಕುತ್ತಿವೆ. ಇನ್ನೊಂದಡೆ ಈ ಜಾತಿ ಧರ್ಮ, ನಂಬಿಕೆ ವರ್ಗಗಳ ಕಾರಣದಿಂದ ಸಂಘರ್ಷಗಳು ನಡೆಯುತ್ತಿವೆ. ಕಾನೂನಿ ಮೂಲಕ ತೊಡೆದು ಹಾಕಿದ ಆಸ್ಪೃಶ್ಯತೆ ಇನ್ನೂ ಚಾಲ್ತಿಯಲ್ಲಿದೆ. ಅಧಿಕಾರದಲ್ಲಿರುವವರು. ಶ್ರೀಮಂತರು ಮೇಲ್ವರ್ಗದವರೆಂದು ತಿಳಿದರು. ಸಮಾಜದಲ್ಲಿ ಮೇಲಂತಸ್ತಿನಲ್ಲಿರುವವರು ತಮ್ಮ ಕೈ ಕೆಳಗಿನವರನ್ನು ಶೋಷಿಸುವುದು. ಸಾಮಾನ್ಯ ವಿಷಯವಾಗಿದೆ. ಲಂಚ ಬ್ರಷ್ಟಾಚಾರಗಳು ದೈನಂದಿನ ವಿಷಯಗಳಾಗಿವೆ. ಸಂಪನ್ಮೂಲಗಳು ಕೆಲವೇ ಜನರ ಕೈಯಲ್ಲಿದ್ದು ಇನ್ನೂ ಕೂಡ ನಾವು ಸಾಕ್ಷರತೆಯಲ್ಲಿ ಶೇಕಡ 100 ಮುಟ್ಟಿಲ್ಲ ಕರ್ನಾಟಕದ ಒಟ್ಟು ಸಾಕ್ಷರತೆ 2001 ರ ಅಂಕಿ ಅಂಶಗಳ ಪ್ರಕಾರ 67.64% ಆಗಿರುತ್ತದೆ ಸ್ತ್ರೀ ಪುರುಷರ ಸಾಕ್ಷರತೆ ಪ್ರಮಾಣಕ್ಕೆ ಹೋಲಿಸಿದಾಗ ಪುರಷರಲ್ಲಿ 76.10% ಮತ್ತು ಮಹಿಳೆಯಲ್ಲಿ 56.97% ಆಗಿರುತ್ತದೆ. ಇದೆರೊಂದಿಗೆ ಲಭ್ಯವಿರುವ. ಶಿಕ್ಷಕರಾದ ಗುಣಮಟ್ಟ ಯಾವ ಹಂತದ ಶಿಕ್ಷಣ ಸಿಗುತ್ತದೆ. ನಮ್ಮಲ್ಲಿ ಎಷ್ಟುಮಂದಿಗೆ ಯಾವ ಹಂತದ ಉದ್ಯೋಗಗಳದೆ ಯಾವ ರೀತಿಯ ಕೌಶಲ್ಯಗಳಿವೆ ಎಂಬುದನ್ನು ವಿವೇಚಿಸಬೇಕು. ನಮ್ಮ ಶಿಕ್ಷಣ ಸಂಸ್ಥೆಗಳು, ನಮ್ಮ ಊರಿಂದ ಎಷ್ಟು ದೂರ ಇವೆ. ಇದಲ್ಲದೆ ನಮ್ಮ ಸಮಾಜದಲ್ಲಿ ಮೂಢ ನಂಬಿಕೆಗಳು ಸಂಪ್ರದಾಯ, ಪದ್ಧತಿಗಳು ಅಭಿವೃದ್ಧಿಗೆ ಪೂರಕವಾಗಿವೆಯೇ? ನಮ್ಮ ವ್ಯವಸ್ಥೆಗಳು ಧಾರ್ಮಿಕ ಸಂಸ್ಥೆಗಳು ಸರ್ಕಾರಿ ವ್ಯವಸ್ಥೆ, ಕಾನೂನು ವ್ಯವಸ್ಥೆ ಶಿಕ್ಷಣ ಸಂಸ್ಥೆಗಳು ಯಾವ ರೀತಿ ಕಾರ್ಯ ನಿರ್ವಹಿಸುತ್ತಿವೆ. ಅವರಿಗೆ ಮಧ್ಯಮ ಸಂಪರ್ಕ ಇದೆಯೇ ವರದಕ್ಷಣೆ ಬಾಲ್ಯವಿವಾಹ, ಎಷ್ಟರ ಮಟ್ಟಿಗೆ ಇದೆ. ದೇವದಾಸಿ ಪದ್ಧತಿ ಎಷ್ಟಿದೆ.? ಪ್ರತಿ ಕುಟುಂಬವನ್ನು ನೋಡಿದಾಗ ಯಾವ ಕೆಟ್ಟ ಚಟಗಳು ನಮ್ಮಲ್ಲಿವೆ ನಮ್ಮ ಆರೋಗ್ಯ ವ್ಯವಸ್ಥೆಗಳು ಯಾವ ರೀತಿ ನಮಗೆ ಸಹಕಾರ ನೀಡುತ್ತದೆ. ಸರಕಾರ ಮತ್ತು ಮಾಧ್ಯಮಗಳು ಸೂಕ್ತವಾಗಿ ಸ್ಪಂದಿಸುತ್ತವೆ.

ಈ ಮೇಲಿನ ಎಲ್ಲಾ ಪ್ರಶ್ನೆಗಳಿಗೆ ಉತ್ತರವಾಗಿ ಸ್ವಯಂತ ಸೇವಾ ಸಂಸ್ಥೆಗಳು ಹುಟ್ಟಿಕೊಂಡು, ಈ ಮೇಲಿನ ಜನರ ಜನರ ಅಂದರೆ ಹಿಂದುಳಿದ ವರ್ಗದವರ ಶ್ರೇಯೋಭಿವೃದ್ಧಿಗೆ ಶ್ರಮಿಸಲೆಂದೇ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ ಅಂತಹ ಕಾರ್ಯಕ್ರಮಗಳು ಈ ಕೆಳಗಿನಂತಿವೆ.

**ದೇವದಾಸಿಯರ ಅಭಿವೃದ್ಧಿ ಕಾರ್ಯಕ್ರಮಗಳು.**

❖ **ಜಾಗೃತಿ ಕಾರ್ಯಕ್ರಮ :**

ಪ್ರತಿಯೊಂದು ಸ್ವಯಂ ಸೇವಾ ಸಂಸ್ಥೆಯೂ ದೇವದಾಸಿ ಪದ್ಧತಿಯ ವಿರುದ್ಧ ಧ್ವನಿ ಎತ್ತಿದೆ. ಪ್ರತಿಯೊಂದು ತಾಲೂಕಿನಲ್ಲಿಯೇ ಜಾಗೃತಿ ಕಾರ್ಯಕ್ರಮವನ್ನು ಮಾಡಲಾಗಿದೆ. ಇದು ಅಪರಾಧ ಮತ್ತು ಕಾನೂನು

ಬಾಹೀರ ಎಂದು ಎಲ್ಲಾ ಕಡೆ ಹೇಳಿ ಅವರಿಗೆ ಪುನರ್ವಸತಿ ಕಲ್ಪಿಸಿ ಕೊಡಬೇಕೆಂದು ಪ್ರಯತ್ನಿಸಿದರೂ ಈ ಪ್ರಯತ್ನ ಇನ್ನು ಯಶ ಕಂಡಿಲ್ಲ.

❖ **ಮನೆ ಬೇಟಿ:** ಕೆಲವೊಂದು ಸಂಸ್ಥೆಗಳು ಉದಾ:- ಅಥಣಿಯಲ್ಲಿರುವ ಸಂಸ್ಥೆ ದೇವದಾಸಿಯವರ ಮನೆಗೆ ಪ್ರತಿದಿನ ಬೇಟಿ ಮಾಡಿ ಅವರ ಆರೋಗ್ಯದ ಬಗ್ಗೆ ವಿಚಾರಿಸುತ್ತಾ ಅವರನ್ನು ಆ ಪದ್ಧತಿಯನ್ನು ಕೈಬಿಡಲಿಕ್ಕೆ ಪ್ರೋತ್ಸಾಹ ಮಾಡುತ್ತಿತ್ತು. ನಂತರ ಅವರಿಗೆ ಬೇಕಾದ ಪುನರ್ವಸತಿ ಮಾಡಲಿಕ್ಕೆ ತಯಾರಿದೆ ಎಂದು ಇಲ್ಲಿ ಪ್ರಸ್ತಾಪಿಸಬಹುದಾಗಿದೆ.

- ❖ **ಜಾತಾ ಮತ್ತು ಬೀದಿನಾಟಕ :** ಈ ಅನಿಷ್ಟ ಪದ್ಧತಿಯನ್ನು ಕೈ ಬಿಡಲು ಕೆಲವು ಸಂಸ್ಥೆಗಳುಬೀದಿನಾಟಕ ಮೂಲಕ ದೇವದಾಸಿಯರಿಗೂ ಮತ್ತು ಸಮಾಜಕ್ಕೂ ಯಾವ ರೀತಿಯ ದುಷ್ಪರಿಣಾಮಗಳಾಗುತ್ತವೆ ಎಂಬುದನ್ನು ಬೀದಿನಾಟಕಗಳ ಮೂಲಕ ತೋರಿಸಲಾಯಿತು ಮತ್ತು ಶಾಲಾ ಮಕ್ಕಳನ್ನು ಜೊತೆಗೂಡಿಸಿಕೊಂಡು ದೇವದಾಸಿ ಪದ್ಧತಿ ವಿರುದ್ಧಿ ಜಾತಾ ಕಾರ್ಯಕ್ರಮಗಳನ್ನು ಕೂಡಾ ಕೈಗೊಳ್ಳಲಾಯಿತು. ಮತ್ತು ಹೆಣ್ಣಿನ ಹಕ್ಕುಗಳ ಕುರಿತು ಮತ್ತು ಈ ಪದ್ಧತಿಯ ವಿರುದ್ಧ ಜನ ಹೆಚ್ಚೆತ್ತು ಕೊಳ್ಳಲಿ ಎಂಬ ಕಾರಣಕ್ಕೆ ಗೋಡೆ ಬರಹಗಳನ್ನು ಕೈಗೊಳ್ಳಲಾಗಿದೆ.
- ❖ **ಆರೋಗ್ಯ ತಪಾಸಣಾ ಶಿಬಿರ:-** ದೇವದಾಸಿಯರು ದೇವರ ಜಪ ಮಾಡುವುದರಿಂದ ಮತ್ತು ಲೈಂಗಿಕತೆಯಲ್ಲಿ ಬೇರೆ ಬೇರೆಯವರನ್ನು ಅರಸುವುದರಿಂದ ಲೈಂಗಿಕ ಸಂಬಂಧ ಪಟ್ಟ ಕಾಯಿಲೆಗಳು ಹೆಚ್ಚು ಕಾಣಿಸಿಕೊಳ್ಳುವ ಸಾಮ್ಯತೆಗಳು ಹೆಚ್ಚು ಉದಾಹರಣೆ ಹೆಚ್.ಐ.ವಿ / ಏಡ್ಸ್ ಮತ್ತು ಲೈಂಗಿಕ ಸೋಂಕು ರೋಗಗಳು ಅದಕ್ಕೋಸ್ಕರ ಸ್ವಯಂ ಸೇವಾ ಸಂಸ್ಥೆಗಳು.
- ❖ **ಸ್ವ ಸಹಾಯ ಸಂಘಟಗಳ ರಚನೆ:-** ಒಂದು ಮನೆ ಉದ್ಧಾರವಾಗಬೇಕಾದರೆ ಆ ಮನೆಯ ಹೆಣ್ಣು ಬುದ್ಧಿವಂತಳಾಗಿರಬೇಕು ಹಾಗೆಯೇ ಒಂದು ರಾಜ್ಯ ಅಥವಾ ಒಂದು ದೇಶ ಉದ್ಧಾರವಾಗ ಬೇಕಾದರೆ ಅಲ್ಲಿನ ಹೆಣ್ಣು ಮಕ್ಕಳು ವಿದ್ಯಾವಂತರು ಜ್ಞಾನವಂತರು, ಬುದ್ಧಿ ವಂತರಾಗಿರಬೇಕು. ಅಥವಾ ಆ ಬುದ್ಧಿಯನ್ನು ಬೆಳಸಿಕೊಳ್ಳಬೇಕಾದರೆ ಮತ್ತು ಆರ್ಥಿಕವಾಗಿ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಬೇಕಾದರೆ ಸ್ವ ಸಹಾಯ ಸಂಘಗಳನ್ನು ರಚಿಸಿ ಕೊಳ್ಳಬೇಕು.

ಈ ಸ್ವಸಹಾಯ ಸಂಘಗಳಿಗೆ ಸರ್ಕಾರದಿಂದ, ಸ್ವಯಂ ಸೇವಾ ಸಂಸ್ಥೆಗಳಿಂದ ಧನ ಸಹಾಯ ಕೌಶಲ್ಯ ವೃದ್ಧಿಗೆ ತರಬೇತಿ ಮತ್ತು ಸಂಘವನ್ನು ನಿಭಾಯಿಸಲಿಕ್ಕೆ ತರಬೇತಿಗಳನ್ನು ಕೊಡಲಾಗುತ್ತಿದೆ. ಮತ್ತು ಶಿಕ್ಷಕರಾದ ಸಲುವಾಗಿ ಸಾಕ್ಷರತಾ ಕೇಂದ್ರಗಳನ್ನು ತೆರೆಯಲಾಗುತ್ತಿದೆ.

❖ **ದೇವದಾಸಿ ಮಕ್ಕಳಿಗೆ ಪುನರ್ವಸತಿ :-** ಸಮಾಜದ ದೇವದಾಸಿ ಮಕ್ಕಳಿಗೆ ಒಂದು ಸ್ಥಾನಮಾನ ಸಿಗುವುದು ಕಷ್ಟ ಆದ್ದರಿಂದ ಅವರಗೋಸ್ಕರ ಪುನರ್‌ವಸತಿ ಕಲ್ಪಿಸಲು ಉಚಿತ ವಸತಿ ನಿಲಯ ವ್ಯವಸ್ಥೆ, ಮತ್ತು ಶಿಕ್ಷಣ, ಮತ್ತು ರಜಾ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಈ ರೀತಿಯಾಗಿ ಅಂದರೆ ಶಿಕ್ಷಣದ ಬಗ್ಗೆ ಮತ್ತು ಆರೋಗ್ಯದ ಬಗ್ಗೆ ಮತ್ತು ದೇವದಾಸಿ ನಿರ್ಮೂಲನೆ ಬಗ್ಗೆ ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರು 80 ಸ್ವಯಂ ಸೇವಾ ಸಂಸ್ಥೆಗಳಿದ್ದು ಕೆಲವು ಮಾತ್ರ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿವೆ. ಮತ್ತು ಬಳ್ಳಾರಿ ಜಿಲ್ಲೆಯಲ್ಲಿ 80 ಸ್ವಯಂ ಸೇವಾ ಸಂಸ್ಥೆಗಳಲ್ಲಿ ಬೆರಳೆಣಿಕೆಯಷ್ಟೇ ಬುಡಕಟ್ಟು ಸಮುದಾಯದ ಮೇಲ್ವಿಚಾರಣಾ ಸಂಸ್ಥೆಗಳಿದ್ದರೂ ಅದರ ಕಾರ್ಯ ವೈಖರಿ ಎಲ್ಲಾ ಜನಾಂಗದವರಿಗೂ ಸಂಬಂಧ ಪಟ್ಟಿದ್ದಾಗಿರುತ್ತದೆ.

ಇಂದಿನ ದಿನಗಳಲ್ಲಿ ಇಡೀ ಮಾನವ ನಿರ್ಮಿತ ಸಮಾಜದಲ್ಲಿ ಹಲವಾರು ಸಮಸ್ಯೆಗಳನ್ನು ಕಾಣಬಹುದಾಗಿದೆ. ಪ್ರತಿಯೊಬ್ಬ ಮನುಷ್ಯನು ಈ ಸಮಾಜದಲ್ಲಿನ ಹಾಗೂ ಹೋಗುಗಳಿಗೆ ಕಾರಣನಾಗಿದ್ದಾನೆ. ಮನುಷ್ಯನಿಗೆ ಅವಶ್ಯವಾದ ಉದಾ:- ಶಿಕ್ಷಣ, ಆಹಾರ ಮೂಢನಂಬಿಕೆ ಹಾಗೂ ಕಡುಬಡತನ ಇಂಥಹ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಆದರೆ ಇಂತಹ ಸಮಸ್ಯೆಗಳನ್ನು ನಿವಾರಿಸಲು ಸರಕಾರದಿಂದ ಪರಿಪೂರ್ಣವಾಗಿ ಸಾಧ್ಯವಾಗುವುದು ಅಸಾಧ್ಯ ಇಂತಹ ಒಂದು ಪರಿಸ್ಥಿತಿಯಲ್ಲಿ ಎನ್.ಜಿ.ಓ. ಗಳಂತರಹ ಸಂಸ್ಥೆಗಳೂ ಹುಟ್ಟಿಕೊಂಡವು ಈ ಸಂಸ್ಥೆಗಳು ಜನರ ಸಮಾಜದ ಕೆಲವು ಸಮಸ್ಯೆಗಳನ್ನು ಪರಿಹರಿಸಲು ಸಹಾಯಕವಾಗಿವೆ ಇಂತಹ ಎನ್.ಜಿ.ಓ. ಗಳು ಮಕ್ಕಳ ಶೈಕ್ಷಣಿಕ ಬೆಳವಣಿಗೆಗೆ ಮಹಿಳೆಯ ಸಬಲೀಕರಣಕ್ಕಾಗಿ, ದೇವದಾಸಿಯರ ನಿರ್ಮೂಲನಕ್ಕಾಗಿ ಹಾಗೂ ಹಲವು ರೋಗ ರುಜಿನಿಗಳ ನಿಯಂತ್ರಣಗಳಿಗೆ ಈ ಎನ್.ಜಿ.ಓ.ಗಳು ಹಗಲಿರುಳು ಶ್ರಮವಹಿಸಿ ದುಡಿಯುತ್ತಿರುವುದು ಉತ್ತಮ ಸಮಾಜ ನಿರ್ಮಾಣದ ಧ್ಯೇಯೋದ್ದೇಶಗಳನ್ನು ಹೊಂದಿದೆ.

ಈ ರೀತಿಯಾಗಿ ನಾವು ಈ ಮೂಲಕ ಪ್ರಗತಿಯನ್ನು ಹೇಳಬಹುದಾಗಿದೆ.

**4.4 ಬಾಲಕಾರ್ಮಿಕರ ಪುನರ್ವಸತಿ ಹಾಗೂ ಸಮುದಾಯ ಸಬಲೀಕರಣ:-**

ಮಕ್ಕಳು ದೇಶದ ಸಂಪತ್ತು ಇಂದಿನ ಮಕ್ಕಳೇ ನಾಳಿನ ಪ್ರಜೆಗಳು ಆದರೆ ಇಂದು ಎಷ್ಟೋ ಮಕ್ಕಳು ದಿನದ ಊಟವಿಲ್ಲದೇ ಹಸುನೀಗುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಮಕ್ಕಳನ್ನು ರಕ್ಷಿಸಿದ ಹೋದರೆ ದೇಶದ ಅವನತಿ ಖಂಡಿತ. ಒಂದು ದೇಶದ ಭವಿಷ್ಯವನ್ನು ತಿಳಿಯಬೇಕಾದರೆ ಆ ದೇಶದ ಮಗುವನ್ನು ನೋಡಿದರೆ ತಿಳಿಯುತ್ತದೆ. ಅದಕೊಸ್ಕರ ವಿಶ್ವಸಂಸ್ಥೆಯವರು ಮಕ್ಕಳಿಗೋಸ್ಕರ ಕೆಲವೊಂದು ಹಕ್ಕುಗಳನ್ನು ಮಾಡಿದೆ ಮತ್ತು ಮಕ್ಕಳ ಅಭಿವೃದ್ದಿಗೋಸ್ಕರ ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರ ಹಾಗು ವಿದೇಶಿ ಸಂಸ್ಥೆಗಳು ಮಕ್ಕಳ ಅಭಿವೃದ್ದೀಗೋಸ್ಕರ ಧನ ಸಹಾಯವನ್ನು ಮಾಡುತ್ತಿವೆ. ಅದಕ್ಕಾಗಿ ಈ ನಿಟ್ಟಿನಲ್ಲಿ ಕಾರ್ಯಗಳನ್ನು ನಿರ್ವಹಿಸುತ್ತಿವೆ.

ಮಕ್ಕಳ ಹಕ್ಕುಗಳು ಎಲ್ಲಾ ಮಕ್ಕಳಿಗೂ ಇರಬೇಕಾದದು ಮಕ್ಕಳು ಮಾಡಬಹುದಾದದು. ಇವೆಲ್ಲವನ್ನು ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಪಟ್ಟಿ ಮಾಡಲಾಗಿದೆ. ಈ ಹಕ್ಕೂಗಳನ್ನು ಜಗತ್ತಿನ ಎಲ್ಲಾ ರಾಷ್ಟ್ರಗಳು ಒಪ್ಪಿಕೊಂಡಿವೆ. ಭಾರತ 1992 ರಲ್ಲಿ ಒಡಂಬಡಿಕೆಗೆ ಸಹಿ ಹಾಕಿತು.

ಮಕ್ಕಳ ಎಲ್ಲಾ ಹಕ್ಕುಗಳು ಒಂದಕ್ಕೊಂದು ಸಂಬಂದವನ್ನು ಹೊಂದಿದೆ. ಹಾಗು ಪ್ರತಿಯೊಂದಕ್ಕೂ ಒಂದೇ ರೀತಿಯ ಪ್ರಾಮುಖ್ಯತೆಯಿದೆ. ಮಕ್ಕಳಿಗೆ ಯಾವುದೆ ಸೂಕ್ತವಾದುದು. ಮಕ್ಕಳು ಜೀವಿಸಲು, ರಕ್ಷಣೆ ಪಡೆಯಲು ಅಭಿವೃದ್ಧಿ ಹೊಂದಲು, ಭಾಗವಹಿಸಲು ಯಾವುದು ಮುಖ್ಯ ಎಂಬ ಹಿನ್ನೆಲೆಯಲ್ಲಿ ಈ ಹಕ್ಕುಗಳನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ನೀವು ಬೆಳೆದಂತೆ, ಹಕ್ಕುಗಳನ್ನು ಚಲಾಯಿಸಲು ಹಾಗೂ ಆಯ್ದುಕೊಳ್ಳಲು ನಿಮಗೆ ಹೆಚ್ಚಿನ ಜವಬ್ದಾರಿಗಳು ಬರುತ್ತವೆ.

<u>ಹಕ್ಕುಗಳು :</u>

1) ಎಲ್ಲಾ ಮಕ್ಕಳಿಗೂ ಬದುಕುವ ಹಕ್ಕು ಇದೆ. ಮಗುಹುಟ್ಟಿದ ಮೊದಲೇ ತಾಯಿಯ ಹಾರೈಕೆ ಬೇಕಾದ ಔಷದೋಪಚಾರ, ತೊಂದರೆ ಇಲ್ಲದ ಹೆರಿಗೆ, ಬೆಳೆವ ಮಗುವಿಗೆ ಆರೋಗ್ಯ ಸೇವೆ, ಪೌಷ್ಟಿಕ ಆಹಾರ, ಪರಿಶುದ್ಧವಾದ ಗಾಳಿ, ನೀರು, ವಾತಾವರಣ, ಸೂಕ್ತವಾದ ಸೌಲಭ್ಯಗಳಿರುವ ಮನೆ, ಇತ್ಯಾದಿಗಳನ್ನು ಎಲ್ಲಾ ಮಕ್ಕಳಿಗೆ ದೂರೆಕಿಸುವುದು ಆಯಾ ಸಮುದಾಯಗಳ ಕರ್ತವ್ಯ
2) ಬದುಕುವ ಮಕ್ಕಳಿಗೆ ತೊಂದರೆ ತೊಡಕುಗಳಲ್ಲಿದೆ ಬೆಳೆಯಲು ಅವರು 'ರಕ್ಷಣೆಯಹಕ್ಕು' ಹೊಂದಲೇಬೇಕು. ಮಕ್ಕಳ ಮೇಲೆ ದೌರ್ಜನ್ಯ, ಹಿಂಸೆ, ಒತ್ತಡ ತಪ್ಪಿಸುವುದು ಇದರ ಉದ್ದೇಶ, ಮಕ್ಕಳಿಗೆ ಅವರ ಮನೆ ಅಥವಾ ಮನೆಯ ಹೊರೆಗೆ ಬದುಕಲು ಸಮಾಜದ ಅವಶ್ಯಕತೆ ಇದೆ. ಇಲ್ಲಿನ ಆಶಯ ಯಾವುದೇ ಮಗು ಒತ್ತಡದೆಡಿ ದುಡಿಯಬಾರದು. ಜೀತದಲ್ಲಿ, ಸಿಲುಕಬಾರದು, ಯಾರದೋ ಕಾಮುಕ ಬಯಕೆಗಳನ್ನು ತೀರಿಸಲು ನೆಲುಗೆಬಾರದು.
3) ಒಂದು ಮಗು ಹುಟ್ಟಿ ಬೆಳದರೆ ಸಾಲದು ಮಾನಸಿಕ ಮತ್ತು ವ್ಯಕ್ತಿತ್ವ ವಿಕಾಸಗದ ಅವಶ್ಯಕತೆಯೂ ಸಹ ಮಕ್ಕಳಿಗಿದೆ. ಮಕ್ಕಳಿಗೆ ಅಭಿವೃದ್ಧಿ 'ಹೊಂದುವ ಹಕ್ಕು' ಇದ್ದು ಆ ದಿಸೆಯಲ್ಲಿ, ಶಿಕ್ಷಣದ ಹೆಕ್ಕಿಸಿ ಜೊತೆಯಲ್ಲಿ ಎಲ್ಲಾ ಮಕ್ಕಳಿಗೂ ವಿಶ್ರಾಂತಿ ಮನೋರಂಜನೆ ಹೊಂದಲು ಸೂಕ್ತ ವ್ಯವಸ್ಥೆಯನ್ನು ಸಮುದಾಯಗಳು ನಿರ್ಮಾಣ ಮಾಡಬೇಕು, ಸಾಮಾಜಿಕ ಭದ್ರತೆಯನ್ನು ಮಕ್ಕಳಿಗೆ ಖಾತರಿಗೊಳಿಸುವುದು ಸಹ ಸ್ಥಳೀಯ ಸಂಸ್ಥೆಗಳು ಹಾಗೂ ಸರಕಾರದ ಜವಬ್ದಾರಿ.
4) ತಮ್ಮ ಬಗ್ಗೆ ನಿರ್ಧಾರ ಕೈಗೊಳ್ಳಲು ಕುರಿತು ಆಗುವ ಚರ್ಚೆ, ಚಿಂತೆನೆಗಳಲ್ಲಿ, ಅಭಿಪ್ರಾಯ ವ್ಯಕ್ತಪಡಿಸಲು, ಸಾಂಘಿಕ ಚಟುವಟಿಕೆಗಳಲ್ಲಿ, ತೊಡೆಗಿಕೊಳ್ಳಲು ಅವಕಾಶ ಮಕ್ಕಳಿಗೆ ಸಿಗಲಿಬೇಕು. ಇಂತಹದನ್ನು ಮಕ್ಕಳ 'ಭಾಗವಹಿಸುವ ಹಕ್ಕು' ಎಂದು ಗುರುತಿಸಲಾಗಿದೆ.

**ಕರ್ನಾಟಕ ಮಕ್ಕಳ ಸ್ಥಿತಿಗತಿ:**

1) ಶಾಲೆಯಿಂದ ಹೊರಗಿದ್ದ 6–14 ವರ್ಷದ ಮಕ್ಕಳ ಸಂಖ್ಯೆ (2001)=10,53744.
2) 2003 ಸೆಪ್ಟಂಬರ್ ನಲ್ಲಿ, ಈ ಸಂಖ್ಯೆಯನ್ನು 2 ಲಕ್ಷ ಎನ್ನಲಾಗಿತ್ತು. 2004 ರ ಎಪ್ರಿಲ್‌ನಲ್ಲಿ 60,000 ಎನ್ನಲಾಗಿದೆ.
3) ಒಂದರಿಂದ ಐದನೇ ತರಗತಿಯ ವರೆಗೆ ಶಾಲೆ ಬಿಡುವ ಮಕ್ಕಳ ಸಂಖ್ಯೆ 8.2%.
4) ಶಾಲೆ ಸೇರುವ ಹೆಣ್ಣು ಮಕ್ಕಳ ಸಂಖ್ಯೆ 88% ಆದರೂ ಪ್ರೌಢ ತರಗತಿಗಳಿಗೆ ಬರುವ ಹೊತ್ತಿಗೆ ಈ ಸಂಖ್ಯೆ ಅರ್ಧಕ್ಕೆ ಇಳಿಯುತ್ತದೆ.
5) ಶಾಲೆ ಬಿಡುವ ಮಕ್ಕಳ ಸಂಖ್ಯೆ 59.82% ಇದೆ.
6) ಶಾಲೆ ಬಿಡುವ ಹೆಣ್ಣು ಮಕ್ಕಳ ಸಂಖ್ಯೆ 65.82% (1–7 ನೇ ತರಗತಿ)
7) ಪ್ರಾಥಮಿಕ ಪೂರ್ವ ತರಗತಿಗಳಿಗೆ ಹಾಜರಾದ ಮಕ್ಕಳ ಕೇವಲ 64.4%
8) ಸಂವಿಧಾನದಲ್ಲಿ, ಶಿಕ್ಷಣ ಮೂಲಭೂತ ಹಕ್ಕು ಎಂದು ಹೇಳಲಾಗಿದೆ. ಈಗ ನಾವು ಗಮನ ನೀಡಬೇಕಾಗಿರುವುದು ಶಾಲಾ ವ್ಯವಸ್ಥೆಗಳ ಬಗ್ಗೆ
9) ರಾಜ್ಯದಲ್ಲಿರುವ 43000 ಶಾಲೆಗಳಲ್ಲಿ ಕೇವಲ 17.266 ಶಾಲೆಗಳಲ್ಲಿ, ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯವಿದೆ. ಮತ್ತು 17651 ಶಾಲೆಗಳಲ್ಲಿ, ಕುಡಿಯುವ ನೀರಿನ ಸೌಲಭ್ಯವಿದೆ.

**ಆರೋಗ್ಯ:**

1) ಕರ್ನಾಟಕದಲ್ಲಿ ಒಂದು ಸಾವಿರ ಮಕ್ಕಳು ಹುಟ್ಟಿದಲ್ಲಿ, ಆದರಲ್ಲಿ, 58 ಮಕ್ಕಳು ಒಂದು ವರ್ಷ ಪೂರೈಸುವುದರಲ್ಲಿ, ಮರಣಹೊಂದುತ್ತಾರೆ.
2) ಮಕ್ಕಳು ಸಾಯಲು ಮುಖ್ಯಕಾರಣಗಳು, ತಡೆಗಟ್ಟಬಹುದಾದ ಸೋಂಕುಗಳು, ವಾಂತಿ, ಬೇಧಿ, ಕಾಲರ, ಕ್ಷಯ, ಮಲೇರಿಯ ಮತ್ತು ಕಲುಷಿತ ನೀರು.



3) ಆಸ್ಪತ್ರೆಯಲ್ಲಿ ನಡೆದಿರುವ ಹೆರಿಗೆಗಳು 52.9%
4) ಪ್ರತಿ ಲಕ್ಷ ಹೆರಿಗೆಗಳಾದಾಗ 195 ತಾಯಂದಿರು ನಿಧನ ಹೊಂದುತ್ತಾರೆ. 18 ವರ್ಷಗಳಾಗುವುದಕ್ಕೆ ಮೊದಲೆ ಹೆಣ್ಣುಮಕ್ಕಳು ಗರ್ಭಧರಿಸುವುದು ಸಹ ಇದಕ್ಕೆ ಕಾರಣ.
5) 5–19 ವರ್ಷದೊಳಗಿನ 35% ಹೆಣ್ಣುಮಕ್ಕಳಿಗೆ ಮದುವೆಯಾಗುತ್ತಿದೆ. ಗರ್ಭಧರಿಸುವ ವಯಸ್ಸು ಸರಾಸರಿ 16.5 ಮತ್ತು ಜನ್ಮ ನೀಡುವ ವಯಸ್ಸು 16.8 ವರ್ಷ.
6) ಐದು ವರ್ಷದೊಳಗಿನವರಲ್ಲಿ ಅಪೌಷ್ಟಿಕತೆಯ ಪ್ರಮಾಣ 6.2% ಇವರಲ್ಲಿ, ಅತೀವವಾದ ಅಪೌಷ್ಟಿಕತೆಯನ್ನು ಹೊಂದಿರುವ ಮಕ್ಕಳ ಸಂಖ್ಯೆ 90.6%.
7) ಹುಟ್ಟಿದ 35% ಮಕ್ಕಳು ಕಡಿಮೆ ತೂಕ ಹೊಂದಿದ್ದಾರೆ.
8) ಕರ್ನಾಟಕದಲ್ಲಿ 32.2 ಜನ ಅಯೋಡಿನ್ ಇಲ್ಲದೆ ಉಪ್ಪು ಬಳಸುತ್ತಾರೆ.

9) ಎಲ್ಲಾ ರೋಗ ನಿರೋಧಕಗಳನ್ನು ತೆಗೆದುಕೊಂಡ ಮಕ್ಕಳ ಸಂಖ್ಯೆ 60%

10) 0–6 ವರ್ಷದವರಲ್ಲಿ ಹೆಣ್ಣುಗಂಡು ಪ್ರಮಾಣ 949/1000 15–19 ವರ್ಷದವರಲ್ಲಿ ಹೆಣ್ಣು–ಗಂಡು ಪ್ರಮಾಣ 912/1000 (2001 ರ ಜನಗಣತಿ)

ರಕ್ಷಣೆ :

1) ಮಕ್ಕಳ ಈಗಲೂ ದುಡಿಯುತ್ತಿದ್ದಾರೆ. ಕರ್ನಾಟಕ ಸರ್ಕಾರದ ಕಾರ್ಮಿಕ ಇಲಾಖೆಯ ವರದಿಗಳಂತೆ 7.112 ಮಕ್ಕಳ ಅಪಾಯಕಾರಿ ಉದ್ದಿಮೆಯಲ್ಲಿ, ದುಡಿಯುತ್ತಿದ್ದಾರೆ. 32.188 ಮಕ್ಕಳು ಅಪಾಯಕಾರಿಯಲ್ಲಿದ ಉದ್ದಿಮೆಗಳಲ್ಲಿ, ದುಡಿಯುತ್ತಿದ್ದಾರೆ. (2003) ಸರ್ಕಾರೇತರ ಸಂಸ್ಥೆಗಳ ಪ್ರಕಾರ ದುಡಿಯುವ ಮಕ್ಕಳ ಸಂಖ್ಯೆ 20 ಲಕ್ಷಕ್ಕೂ ಹೆಚ್ಚು

2) ಗಂಡು ಹೆಣ್ಣು ಎಂಬ ಬೇದವಿಲ್ಲದೆ ಮಕ್ಕಳು ದುಡಿಮೆಗೆ ಸೂಳೆಗಾರಿಕೆಗೆ ಸಾಗಣೆಗೊಳ್ಳುತ್ತಿದ್ದಾರೆ. ಸೂಳೆಗಾರಿಕೆಗೆ ಗುರಿಯಾಗುವ ವಯಸ್ಸು ದಿನೇ ದಿನೇ ಕಡಿಮೆಯಾಗುತ್ತಿದೆ. ಸೂಳೆಗಾರಿಕೆಯಲ್ಲಿ 20–30% ಮಕ್ಕಳು ಸಿಲುಕಿದ್ದಾರೆಂದು ಅಂದಾಜಿಸಲಾಗಿದೆ.

3) ಕರ್ನಾಟಕದ ಕರಾವಳಿ ಮತ್ತು ಪ್ರಮುಖ ನಗರಗಳಲ್ಲಿ, ಸೂಳೆಗಾರಿಕೆಗೆ ಮಕ್ಕಳಿಗೆ ಹುಡುಕಿಕೊಂಡು ಪ್ರವಾಸ ಬರುವವರಿಗೆ ಮಕ್ಕಳನ್ನು ಒದಗಿಸುವವರಾಗಿದ್ದಾರೆ.

4) ಕರ್ನಾಟಕದಲ್ಲಿ ದೇವದಾಸಿ ಪದ್ಧತಿಗೆ ಇನ್ನು ಕಡಿವಾಣ ಬಿದ್ದಲ್ಲ ದೇವಾದಾಸಿಯರಾಗುವ ಮಕ್ಕಳು ಮುಂದೆ ಸೂಳೆಗಾರಿಕೆಗೆ ಈಡಾಗುವುದು ಸಾಮಾನ್ಯ.

5) ಸಾಗಾಣಿಕೆಗೊಳಗಾಗುವ ಮಕ್ಕಳಲ್ಲಿ, ಅನೇಕರು ಭಿಕ್ಷೆ ಮೊಸದ ದತ್ತು ಮನೆಗೆಲಸದ ಮಕ್ಕಳಾಗುವುದು ಮತ್ತು ಮುಂದೆ ಹಿಂಸೆ, ಕಲೆಗಳಿಗೆ ಈಡಾಗುವುದು ಸಾಮಾನ್ಯ.

6) ಅಭಾದಿತವಾಗಿರುವ ಬಾಲ್ಯ ವಿವಾಹ.

7) ಪ.ಜಾ/ಪ.ಪಂ/ಮತ್ತು ಹಿಂದೂಳಿದ ಜಾತಿ ವರ್ಗ ಹಾಗೂ ಅಲ್ಪ ಸಂಖ್ಯಾತ ಗುಂಪುಗಳಿಗೆ ಸೇರಿದೆ ಮಕ್ಕಲು ವಿವಿಧ ರೀತಿಯ ಶೋಷಣೆ ಮತ್ತು ಲೈಂಗಿಕತೆಗಳಿಗೂ ಬಲಿಯಾಗುತ್ತಿದ್ದಾರೆ.

ಈ ರೀತಿಯ ಅಂಕಿ ಅಂಶಗಳನ್ನು ಗಮನಿಸಿದೆ ರಾಜ್ಯ ಹಾಗೂ ಕೇಂದ್ರ ಸರ್ಕಾರ ಮತ್ತು ವಿದೇಶಿ ದಾನಿಗಳೂ ಸ್ವಯಂ ಸೇವಾ ಸಂಸ್ಥೆಗಳಿಗೆ ಧನ ಸಹಾಯ ಮಾಡಿ ಬಾಲ ಕಾರ್ಮಿಕತೆಯನ್ನು ನಿರ್ಮೂಲನೆಗೊಳಿಸಲು, ಮತ್ತು ಪುನರ್ವಸತಿ ಕಲ್ಪಿಸಲು ಆ ಮಕ್ಕಳಿಗೆ ಸೇತು ಬಂದ ಶಾಲೆಗಳನ್ನು ಮಾಡುತ್ತವೆ ಮತ್ತು ಬಾಲಕಾರ್ಮಿಕರು ಹೊಂದಿದ ಕುಟುಂಬಗಳಿಗೆ ಆರ್ಥಿಕ ಅಭಿವೃದ್ಧಿಯ ಸಲುವಾಗಿ ದಿನ ಸಹಾಯವನ್ನು ಮಾಡಲಾಗಿದೆ.

## ಅಧ್ಯಾಯ-5

## ಬುಡಕಟ್ಟು ಅಭಿವೃದ್ಧಿಯ ಸಾದ್ಯ ಅಸಾಧ್ಯಗಳು

ಕರ್ನಾಟಕದಲ್ಲಿ ಸುಮಾರು ಐವತ್ತಕ್ಕಿಂತ ಹೆಚ್ಚು ಬುಡಕಟ್ಟುಗಳು ನೆಲೆನಿಂತಿವೆ ಈ ಸಮುದಾಯ ತಮ್ಮದೇ ಆದ ಒಂದು ಸೀಮಿತ ವಲಯಲ್ಲಿ ಬದುಕನ್ನು ಕಟ್ಟಿಕೊಂಡು ಬದುಕುತ್ತವೆ. ಸಮಾಜದ ಮುಖ್ಯವಾಹಿನಿಗೆ ಬರದೆ ತಮ್ಮ ಪಾರಂಪರಿಕವಾಗಿ ಬಂದಂತಹ ನಿಕೃಷ್ಟವಾದ ದಾರಿಯಲ್ಲಿಯೇ ಸಾಗುತ್ತಿದ್ದಾರೆ. ಅಭಿವೃದ್ಧಿ ಅನ್ನುವುದು ಇವರ ಪಾಲಿಗೆ ಕನಸಾಗಿದೆ ಸರ್ಕಾರ ಬುಡಕಟ್ಟುಗಳ ಸಮಗ್ರ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ರೂಪಿಸುತ್ತಿವೆ. ಆದರೆ ಆಯೋಜನೆಗಳು ಕೇವಲ ದಾಖಲಾತಿಯಲ್ಲಿ ಮಾತ್ರ ಯೋಜನೆಗಳಾಗಿ ಬರೆಯಲ್ಪಟ್ಟಿವೆ. ಹೀಗಾಗಿ ಈ ಬುಡಕಟ್ಟು ಸಮುದಾಯಗಳು ಮಾತ್ರ ತಾವು ಮೊದಲು ಯಾವ ಸ್ಥಿತಿಯಲ್ಲಿದ್ದು ಜೀವನ ನಡೆಸುತ್ತಿದ್ದವೋ ಅದೇ ದಾರಿಯಲ್ಲಿ ಸಾಗುವರು ಈ ಸಮುದಾಯಗಳು ರಾಜಕೀಯವಾಗಿ, ಸಾಮಾಜಿಕವಾಗಿ, ಅರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿವೆ. ಜನರ ಮೂಲ ಅಗತ್ಯಗಳನ್ನು, ಅಂದರೆ ಮೂಲ ಶಿಕ್ಷಣ, ಕುಡಿಯುವ ನೀರು ಪಡಿತರ, ಕುಟುಂಬ ಯೋಜನೆ ಆರೋಗ್ಯ ಮುಂತಾದ ಸಾರ್ವಜನಿಕ ಸೌಲಭ್ಯಗಳನ್ನು ಒದಗಿಸುವ ಪರಿಯೇ ಅಭಿವೃದ್ಧಿಯಾಗಿದೆ.

ಕಳೆದ 100 ವರ್ಷಗಳ ಕಾಲಾವಧಿಯಲ್ಲಿ ಅಭಿವೃದ್ಧಿಯನ್ನು ವಿವಿಧ ಜ್ಞಾನ ಶಿಸ್ತುಗಳು ಪರಿಭಾವಿಸಿಕೊಂಡ ಬಗೆಯು ವೈವಿದ್ಯಮಯವಾಗಿದೆ. ಅತ್ಯಂತ ಸೀಮಿತ ನೆಲೆಯಿಂದ ಹೊರಟ ನಿರ್ವತನದ ಪರಿಯು ಇಂದು ಅತ್ಯಂತ ವಿಶಾಲವಾದ ವ್ಯಾಪ್ತಿಯಲ್ಲಿ ನೆಲೆಗೊಳ್ಳುವ ದಾರಿಯಲ್ಲಿ ನಡೆದಿದೆ ಬುಡಕಟ್ಟು ಪ್ರದೇಶದಲ್ಲಿ ಅಭಿವೃದ್ಧಿಯು ಅವರ ಬದುಕಿನ ಸ್ಥಿತಿಗತಿಗಳನ್ನು ಉತ್ತಮ ಪಡಿಸಿದೆಯೇ ಅಥವಾ ಹಾನಿಗೊಳಪಡಿಸಿದೆಯೇ ಎಂಬುದರ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸುವ ಮುಖ್ಯಭಾಗವಾಗಿದೆ. ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಬುಡುಕಟ್ಟು ಸಮುದಾಯಗಳಿವೆ ಆದರೆ ಸರ್ಕಾರ ಅವರ ಅಭಿವೃದ್ಧಿಗೆ ಹಲವಾರು ಯೋಜನೆಗಳ ಮೂಲಕ ಅವರಿಗೆ ಈ ಬುಡಕಟ್ಟು ಸಮುದಾಯಗಳಲ್ಲಿ ಅಭಿವೃದ್ಧಿ ಎನ್ನುವಂತದ್ದು ಕುಂಠಿತವಾಗಿದೆ. ಪ್ರಾಚೀನ ಕಾಲದಿಂದಲೂ ಉಳ್ಳವರಿಂದ ತುಂಬಾ ಶೋಷಣೆಯ ಬದಕನ್ನು ಸಾಗಿಸಿದ ಈ ಬುಡಕಟ್ಟುಗಳು ಅವರಿಂದ ಈಗಲೂ ಸಹ ಹೊರಬರಲು ಸಾಧ್ಯವಾಗಿಲ್ಲ ಈ ಅಭಿವೃದ್ಧಿ ಒಂದು ಪರಿಕಲ್ಪನೆ ಅದು ಉನ್ನತ ಸಮುದಾಯಕ್ಕೆ ಮಾತ್ರ ಸೀಮಿತವಾಗಿದೆ ಪರಿಗಣಿಸಿದೆ. ಬುಡಕಟ್ಟುಗಳು ಇತ್ತೀಚೆಗೆ ನಾಗರೀಕ ಸಮುದಾಯಗಳ ಸಂಪರ್ಕದಿಂದ ಅಮೇದತಿಯಲ್ಲಿ ಬದಲಾವಣೆಯಾಗುತ್ತಿದ್ದಾರೆ . ತಮ್ಮ ಪರಂಪರಾಗತವಾಗಿ ಬಂದಿರುವ ಕೆಲವೊಂದು ಆಚಾರ-ವಿಚಾರಗಳನ್ನು ಪಾಲನೆ ಮಾಡಿಕೊಂಡು ಬಂದಿರುವ ಬುಡಕಟ್ಟು ಸಮುದಾಯಗಳು ಬದುಕು ತುಂಬಾ ನಿಕೃಷ್ಟಸ್ಥಿತಿಯಲ್ಲಿದೆ.

ಭಾರತದ ಸಂದರ್ಭದಲ್ಲಿ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳಿವೆ ವಿನಾ ಬುಡಕಟ್ಟು ಅಭಿವೃದ್ಧಿ ನೀತಿ ಎಂಬುದೇನು ಇಲ್ಲ. ನೀತಿ ಬೇರೆ ಕಾರ್ಯಕ್ರಮ ಬೇರೆ. "ನೀತಿ" ಅಂದರೆ

ಪ್ರಜ್ಞಾಪೂರ್ವಕವಾಗಿ ರೂಪಿಸಿದ ಉದ್ದೇಶಗಳನ್ನು ಒಳಗೊಂಡ ಒಂದು ಕಾಯಕಲ್ಪ ಈ ಕಾಯಕಲ್ಪದ ಉದ್ದೇಶಗಳನ್ನು ಈಡೇರಿಸಲು ಇರುವ ಚಟುವಟಿಕೆಗಳೇ "ಕಾರ್ಯಕ್ರಮ" ಬುಡಕಟ್ಟು ಜನರನ್ನು ಗಮನದಲ್ಲಿಟ್ಟುಕೊಂಡು ಅವರ ಸಾಂಸ್ಕೃತಿಕ ಭಿನ್ನತೆ–ಅನನ್ಯತೆ, ಅದರ ಕಾರ್ಯಕ್ಷೇತ್ರ ಅವರ ಕಸಬು ಕ್ರಮ ಅಭಿವೃದ್ಧಿ ಮೀಮಾಂಸೆಯಲ್ಲಿ ಇಲ್ಲ ಅಭಿವೃದ್ಧಿ ನೀತಿಯ ಒಂದು ಭಾಗವೇ ವಿನಾ ಅದೇ ನೀತಿಯಲ್ಲಿ ಈ ಕಾರಣಕ್ಕೆ ಬುಡಕಟ್ಟು ಅಭಿವೃದ್ಧಿಯನ್ನುವುದು ಕೇವಲ ಕಾರ್ಯಕ್ರಮವೇ ವಿನಾ ಅದೇನೂ "ನೀತಿ"ಯಲ್ಲವೆಂದು ಹೇಳಬೇಕಾಗಿದೆ.

ಹೀಗಾಗಿ ಬುಡಕಟ್ಟು ಅಭಿವೃದ್ಧಿಯ ಒಳಗಡೆ ನಿಂತು ಅಭಿವೃದ್ಧಿಯ ಸಾಧ್ಯತೆಯ ಬಗ್ಗೆ ಅಲೋಚಿಸುವುದು ತುಂಬ ಶ್ರಮದಾಯಕವಾದದ್ದು ಈ ಹಳ್ಳಿಗಳ ಅಭಿವೃದ್ಧಿಯೇ ರಾಷ್ಟ್ರದ ಅಭಿವೃದ್ಧಿ ಎಂದು ಗಾಂಧೀಜಿ ಹೇಳುವಂತೆ ಮೊದಲು ಸಾಮಾನ್ಯ ಜನರಂತೆ ಅರಣ್ಯವಾಸಿಯಾಗಿರುವ ಬುಡಕಟ್ಟುಗಳ ಅಭಿವೃದ್ಧಿಯ ಕಡೆ ಗಮನಕೊಡಬೇಕಾಗುತ್ತಿದೆ. ಬುಡಕಟ್ಟುಗಳಿಗೆ ಮೇಲುಸ್ತರಕ್ಕೆ ತರಲು ಯಾವ ರೀತಿಯ ಯೋಜನೆಗಳು ಬೇಕು, ಈ ಸಮುದಾಯವನ್ನು ರೂಪಾಂತರಿಸಲಿಕ್ಕೆ ಯಾವ ರೀತಿಯ ಕ್ರಮಗಳನ್ನು ಅನುಸರಿಸಬೇಕು ಎಂಬುದರ ಬಗ್ಗೆ ಒಂದು ಸರಿಯಾದ ಮಾದರಿ ರೂಪಿಸಿಕೊಳ್ಳಬೇಕು. ಒಟ್ಟಿನಲ್ಲಿ ಇವರ ಸರ್ವಾಂಗೀಣ ಅಭಿವೃದ್ಧಿಯ ಬಗ್ಗೆ ಸರ್ಕಾರವಾಗಲಿ, ಕೆಲವೊಂದು ಸರ್ಕಾರೇತರ ಸಂಘ ಖಂಡಿತವಾಗಿಯು ಈ ಸಮುದಾಯಗಳು ಮುಂದೆ ಬರಲು ಸಾಧ್ಯವಾಗುತ್ತಿದೆ.

ನಾಗರಿಕ ಸಮುದಾಯದ ಜಾಗತೀಕರಣ ಆಧುನೀಕರಣ ಔದ್ಯೋಗೀಕರಣದ ಗಾಳೀ ಸೋಂಕದೆ ತಮ್ಮ ದಟ್ಟವಾದ ಬೆಟ್ಟ ಗುಡ್ಡಕಾಡುಗಳಲ್ಲಿ ಹಣ್ಣು ಹಂಪಲು, ಗಡ್ಡೆ ಗೆಣಸು, ಪ್ರಾಣಿ ಪಕ್ಷಿಗಳನ್ನು ಉಪಯೋಗಿಸಿ ಜೀವನ ನಡೆಸುವಂತಹ ಆದಿವಾಸಿ ಬುಡಕಟ್ಟುಗಳ ಕುರಿತು ಅಭಿವೃದ್ಧಿಯ ಚಿಂತನೆ ಮಾಡುವುದು ಇಂದಿನ ಸಂದರ್ಭದಲ್ಲಿ ಬಹುಮುಖ್ಯವಾದ ವಿಷಯವಾಗಿದೆ. ಅದರಲ್ಲಿ ಅಭಿವೃದ್ಧಿಯನ್ನು ಕುರಿತು ಹೇಳುವುದಾದರೆ ನಮ್ಮ ದೇಶದಲ್ಲಿ ಈಗಾಗಲೇ ಅನುಷ್ಠಾನ ಗೊಂಡಿರುವಂತಹ ಅಭಿವೃದ್ಧಿ ಯೋಜನೆಗಳು ಎಂತಹವು ಎಂಬುದನ್ನು ಪುನರ್ ಪರಿಶೀಲಿಸುವ ಅಗತ್ಯತೆಯಿದೆ. ಯಾವುದೇ ಒಂದು ಅಭಿವೃದ್ಧಿ ನೀತಿಯು ಇಡೀ ದೇಶದ ಅರಣ್ಯವಾಗಿ ಜನಸಮುದಾಯವನ್ನೊಳಗೊಂಡು ಬುಡಕಟ್ಟು ಜನರ ಪರವಾಗಿ ನಿಲ್ಲುವಂತಹದೇ ಅನ್ನುವುದು ಮೊದಲು ಗಮನಹರಿಸಬೇಕಾಗಿದೆ.

ಬುಡಕಟ್ಟು ಜನರ ಅಭಿವೃದ್ಧಿ ಕುರಿತು ನೋಡುವುದಾದರೆ, ತೀರಾ ಆರ್ಥಿಕಾ ತೊಂದರೆಗಳಿಗೆ ಒಳಪಟ್ಟಿದ್ದಾರೆ ಇವರ ಸಾಂಪ್ರದಾಯಿಕ ಕಸುಬುನಿಂದ ಬಂದ ಆದಾಯ ತಮ್ಮ ಕುಟುಂಬ ನಿರ್ವಾಹಣೆಗೆ ತೊಡಗಿಸುವುದರಿಂದ ಇವರಲ್ಲಿ ಕೂಡಿಡುವ ಕ್ರಮ ಇಲ್ಲ. ಉಳ್ಳವರ ಕೂಲಿ ಕೆಲಸಕ್ಕೆ ಹೋದರು ಇವರಿಗೆ ನೀಡುವ ದಿನ ಕೂಲಿ ಅತ್ಯಂತ ಕಡಿಮೆ ಇವರಿಗೆ ಯಾವುದೇ ಆದಾಯಗಳಿಲ್ಲದೆ ಇನ್ನೊಬ್ಬರ ಹೊಲ ಗದ್ದೆಗಳಲ್ಲಿ ಕೆಲಸಮಾಡಿ ಬದುಕನ್ನು ಸಾಗಿಸಬೇಕಾಗಿದೆ. ಮೊದಲರು ಅರಣ್ಯದಲ್ಲಿ ದೊರೆಯುವ ಕೆಲವೊಂದು ಅರಣ್ಯೋತ್ಪಾದನೆಯಿಂದ ತಮ್ಮ ಪರ್ಯಾಯ ಬದುಕನ್ನು ಕಟ್ಟಿಕೊಂಡಿದ್ದರು. ಆದರೆ ಈಗ ಸರ್ಕಾರದ ಕೆಲವೊಂದು ಅರಣ್ಯ ಕಾಯ್ದೆಗಳಿಂದ ಅರಣ್ಯಗಳಲ್ಲಿ ಪ್ರವೇಶಿಸಲು ಅಂಜುವರೋ ಹೀಗಾಗಿ

ಬುಡಕಟ್ಟುಗಳಲ್ಲಿ ಅರೇ ಉದ್ಯೋಗಿಗಳು ಹೆಚ್ಚಾಗಿ ಕಂಡುಬರಲಾಗಿದೆ ಇಂತಹ ಸಂದರ್ಭದಲ್ಲಿ ದುಡಿಮೆಗೆ ಅವಕಾಶವಿಲ್ಲದಿರುವಾಗ, ಬದುಕು ನಿರ್ವಹಿಸುವುದೇ ಕಷ್ಟವಾದಾಗ ಉಳಿತಾಯವೆಂಬುದು ಸಹ ಇವರಲ್ಲಿ ಕಂಡುಬರಲು ಸಾಧ್ಯವಿಲ್ಲ. ಇಂತಹದರಲ್ಲಿ ಸರ್ಕಾರ ಹಮ್ಮಿಕೊಂಡಿರುವ ಸ್ವಸಹಾಯ ಗುಂಪುಗಳಧ್ಯೋಯೋದ್ದೇಶಗಳಿಗೆ ಎದುರಾಗುವಂತಹ ಮನೋಭಾವ ಅವರಲ್ಲಿರುತ್ತದೆಯೇ ಎಂಬುದನ್ನು ಬಹುಮುಖ್ಯವಾಗಿ ಅಧ್ಯಯನಕಾರರು ವಿಚಾರ ಮಾಡುವಂತಹದ್ದು "ಬುಡಕಟ್ಟುತನವನ್ನು ಹಿಂದುಳಿದಿರುವಿಕೆಯ ಸೂಚಿಯಾಗಿ ಬಳಸುವುದು ರೂಢಿಯಲ್ಲಿದೆ. ಆದರೆ ಆಧುನಿಕ ಪೂರ್ವ ಸ್ಥಿತಿಯಲ್ಲಿಯೇ ಅದರ ಹಿಂದುಳಿದಿರುವಿಕೆಯನ್ನು ಸೂಚಿಸುತ್ತಿದೆ. ಎನ್ನಲಾಗಿದೆ. ಕುಲ ಸಂಬಂಧಗಳಿಗೆ ಅಂಟಿಕೊಂಡ ಒಂದು ವ್ಯವಸ್ಥೆ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲವೆಂದು ಭಾವಿಸಲಾಗಿದೆ. ಬುಡಕಟ್ಟುಗಳ ಅಭಿವೃದ್ಧಿಗಿರುವ ಬಹುದೊಡ್ಡ ಕಂಡಕವೆಂದು ಹೇಳಲಾಗಿದೆ. ಅಲ್ಲಿ ಜನತಾಂತ್ರಿಕ ವ್ಯಕ್ತಿವಾದಿ ಸಂಸ್ಥೆಗಳಿಗೆ ಅವಕಾಶವಿರುವುದಿಲ್ಲ ಅಲ್ಲಿಯ ಬದುಕು ಮೂಲತಃ ಜೈವಿಕ ಸ್ವರೂಪದ್ದಾಗಿರುತ್ತದೆ. ವಿನಃ ವಾಣಿಜ್ಯಕವಾಗಿರುವುದಿಲ್ಲ. ಬುಡಕಟ್ಟು ಮತ್ತು ಜೈವಿಕ ಸ್ವರೂಪ ಒಂದೇ ನಾಣ್ಯದ ಎರಡು ಮುಖಗಳಾಗಿವೆ.

ವಾಣಿಜ್ಯ ಮನೋಭಾಗ ಮೈಗೂಡಿಸಿಕೊಳ್ಳದೆ ಅಭಿವೃದ್ಧಿ ಸಾಧ್ಯವಿಲ್ಲ ಈ ಬಗೆಯ ಮನೋಭಾವವೇ ಅಭಿವೃದ್ಧಿಗೆ ಕಂಟಕವಾದುದಾಗಿದೆ. ಬುಡಕಟ್ಟು ಸಮಾಜವು ಸಂಪರ್ಕರಹಿತ ದ್ವೀಪದಂತಹ ಬದುಕನ್ನು ಬಯಸುತ್ತದೆ. ಆದರೆ ಅಭಿವೃದ್ಧಿಗೆ ಸಂಪರ್ಕ ಸಂಚಲನೆ ತುಂಬಾ ಮುಖ್ಯ ಆಧುನಿಕ ಯುಗದ ಅಭಿವೃದ್ಧಿಯ ಬಹುಮುಖ್ಯ ಲಕ್ಷಣವೆಂದರೆ ಚಲನೆ ಇಡೀ ಸಮಾಜ ಜನಸ್ತೋಮವೇ ಚಲನೆಯಲ್ಲಿರಬೇಕು. ಆದರೆ ಬುಡಕಟ್ಟುಗಳಲ್ಲಿ ಚಲನೆಗೆ ಅವಕಾಶ ಕಡಿಮೆ.

ಸಾಮಾಜಿಕ ಅನನ್ಯತೆಯನ್ನು ಗುರುತಿಸುವ ಹೊಸಮಾನದಂಡಗಳು ಪ್ರಮುಖವಾಗಿ ಅಧಿಕಾರ ಮತ್ತು ಸೌಲಭ್ಯಗಳು ದೊರಕುವಿಕೆಯಿಂದ ಎಂದು ಹೇಳಬುದು ಆದರೆ ಈ ಬುಡಕಟ್ಟುಗಳಿಗೆ ಯಾವುದೇ ಸೌಲಭ್ಯಗಳು ಸರಿಯಾಗಿ ಸಿಗದೆ ಅತಂತ್ರ ಸ್ಥಿತಿಯಲ್ಲಿದ್ದಾರೆ. ಅರಣ್ಯವನ್ನೇ ನಂಬಿ ಬದುಕು ಕಟ್ಟಿಕೊಂಡಿದ್ದ ಬುಡಕಟ್ಟುಗಳು, ಆದರೆ ಇಂದು ಸರ್ಕಾರದ ಕೆಲವೊಂದು ಅರಣ್ಯ ಕಾಯ್ದೆಯಿಂದ ಅಲ್ಲಿ ಯಾವುದೇ ಚಟುವಟಿಕೆಗಳನ್ನು ಕೈಗೊಳ್ಳಲು ಸಾಧ್ಯವಾಗಲಾರದು ತನ್ನ ಹೊಟ್ಟೆ ಪಾಡಿಗಾಗಿ ಇಂದು ಎಷ್ಟೋ ದೂರದ ಗ್ರಾಮ ಪಟ್ಟಣಗಳಿಗೆ ಕೂಲಿ ಕೆಲಸಕ್ಕೆ ಹೋಗುವ ವ್ಯವಸ್ಥೆ ನಿರ್ಮಾಣವಾಗಿದೆ. ಹೀಗಾಗಿ ಬುಡಕಟ್ಟುಗಳು ಇಂದು ಪಟ್ಟಣ, ನಗರದ ಕಡೆ ಮುಖಮಾಡಿವೆ ನಾಗರೀಕ ಪ್ರಪಂಚದ ಆಚಾರ ವಿಚಾರಗಳು ಸಹಜವಾಗಿ ಬುಡಕಟ್ಟು ಸಮುದಾಯಗಳ ಮೇಲೆ ಪ್ರಭಾವ ಬೀರಿವೆ ದಿನನಿತ್ಯದ ಎಲ್ಲಾ ಚಟುವಟಿಕೆಗಳ ಮೇಲೆ ಆಧುನಿಕತೆಯ ಪ್ರಭಾವ ಬೀರಿವೆ. ದಿನ ನಿತ್ಯದ ಎಲ್ಲಾ ಚಟುವಟಿಕೆಗಳ ಮೇಲೆ ಆಧುನೀಕತೆಯ ಪ್ರಭಾವ ಬೀರಿದೆ.

ಬುಡಕಟ್ಟುಗಳಿಗೆ ಆರೋಗ್ಯ ಶಿಕ್ಷಣ ಆರ್ಥಿಕ ಸಬಲೀಕರಣ, ರಾಜಕೀಯ ಜಾಗೃತಿ ಮೂಡಿಸಲು ಹಲವು ಹತ್ತು ಸಂಘಟನೆಗಳು ಕಾರ್ಯಶೀಲವಾಗಿವೆ. ಆದರೆ ಕೆಲವೊಂದು ಅಭಿವೃದ್ಧಿ ಪರವಾಗಿರುವ

ಯೋಜನೆಗಳು ಸಫಲವಾಗಿಲ್ಲ. ಇದಕ್ಕೆ ಕಾರಣ ಕೆಲವೊಂದು ಯೋಜನೆಗಳ ಬಗ್ಗೆ ಸರಿಯಾದ ಮುಂಜಾಗ್ರಕತೆ ಇಲ್ಲದೆಯಿರುವುದು. ಹಣದ ದುರಪಯೋಗ ಹಲವಾರು ಆಮಿಶಗಳಿಗೆ. ಒಳಗಾದ ಅಧಿಕಾರಿಗಳು ಹೀಗೆ ಅನೇಕ ರೀತಿಯಿಂದ ಯೋಜನೆಗಳು ಮಣ್ಣುಪಾಲಾಗಿವೆ.

ಬುಡಕಟ್ಟು ನಿಕೃಷ್ಟವಾದ ಬದುಕನ್ನು ಕಾಣಬೇಕಾದರೆ ಅವರು ಚಿಕ್ಕ ಚಿಕ್ಕ ಗುಡುಸಲುಗಳನ್ನು ನೋಡಿದರೆ ಗೊತ್ತಾಗುತ್ತಿದೆ. ಒಳ್ಳೆಯ ಸುಸರ್ಜಿತವಾದ ಮನೆಗಳಲ್ಲಿ ಕುಟುಂಬದಲ್ಲಿರುವ ಮಕ್ಕಳಿಗೆ ಹೊಟ್ಟೆತುಂಬ ಆಹಾರ ಸಿಗದ ಪರಿಸ್ಥಿತಿಯಲ್ಲಿರುವ ಇವರಿಗೆ ಯಾವುದೇ ಸ್ವಂತ ಜಮೀನುಗಳಲ್ಲಿ ಬೇರೆಯವರ ಕೂಲಿಕಸುಬಿಗೆ ಹೋದರೆ ಶ್ರಮದ ತಕ್ಕಂತೆ ಪ್ರತಿಫಲ ದೊರೆಯಲಾರದು. ಬುಡಕಟ್ಟುಗಳು ಆಧುನಿಕ ಪೂರ್ವ ಸ್ಥಿತಿಯಲ್ಲೇ ಇರಲು ಸಾಧ್ಯವಿಲ್ಲ ಆಧುನೀಕರಣ ಪ್ರವಾಹದಿಂದ ಅವು ಅಲಾಯುದ್ಧವಾಗಿರಲು ಸಾಧ್ಯವಿಲ್ಲ. ಬುಡಕಟ್ಟುಗಳ ಅಭಿವೃದ್ಧಿಯನ್ನು ಪುನರ್ ನಿರ್ವಚಿಸುವ ಅಗತ್ಯವಿದೆ ಬುಡಕಟ್ಟುತನವನ್ನೇ ಹಿಂದುಳಿದಿರುವಿಕೆಯಿಂದ ಪರಿಗಣಿಸುವುದರಲ್ಲಿ ಅರ್ಥವಿಲ್ಲ. ಬುಡಕಟ್ಟುತನವನ್ನು ಬುಡಕಟ್ಟುಗಳು ಬಿಟ್ಟುಕೊಡುವುದೇ ಅಭಿವೃದ್ಧಿಗೆ ಸರ್ಕಾರ ಹಾಗೂ ಸರ್ಕಾರೇತರ ಅನೇಕ ಸಂಘ ಸಂಸ್ಥೆಗಳು ಮಾಡುತ್ತಿರುವ ಅಭಿವೃದ್ಧಿಪರ ಕೆಲಸಗಳು ಎಷ್ಟರ ಮಟ್ಟಿಗೆ ಈ ಸಮುದಾಯಗಳಿಗೆ ಉಪಯೋಗವಾಗಿವೆ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಈ ಬುಡಕಟ್ಟುಗಳ ಅಭಿವೃದ್ಧಿಯ ಅಡಿಯಲ್ಲಿ ಹಲವಾರು ಯೋಜನೆಗಳನ್ನು ರೂಪಿಸಿಕೊಂಡಿರುತ್ತಾವೆ. ಈ ಸಮುದಾಯಕ್ಕೆ ಕುಡಿಯುವ ನೀರಿನ ವ್ಯವಸ್ಥೆ, ಆಹಾರ, ಶಿಕ್ಷಣ, ಆರೋಗ್ಯ ಹೀಗೆ ಹಲವಾರು ಅಭಿವೃದ್ಧಿ ಪರ ಯೋಜನೆಗಳನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಲಾಭಕ್ಕಿಂತ ಹಾನಿಯೇ ಅಧಿಕವೆನ್ನಬಹುದು. ಸಮುದಾಯಗಳು ನೆಲೆನಿಂತ ಪ್ರದೇಶದಲ್ಲಿ ಈ ಯೋಜನೆಗಳು ಕಾರ್ಯರೂಪಕ್ಕೆ ಬಂದಿವೆ ಎಂಬ ಹೇಳಿಕೆ ನೀಡಿದವೆಯೇ ಹೊರತು ಅವು ಒಬ್ಬ ಬುಡಕಟ್ಟನ್ನು ಸಹ ಮುಂದೆ ಬೆಳಸಲಿಲ್ಲ. ಕೇವಲ ಅಧಿಕಾರಿಗಳೇ ಅಭಿವೃದ್ಧಿ ಹೊಂದಿದರೆ ಬುಡಕಟ್ಟುಗಳು ವಾಸಿಸರುವ ಪ್ರದೇಶದಲ್ಲಿ ಬಂದರೆ ಅದನ್ನು ಸರಿಯಾದ ರೀತಿಯಲ್ಲಿ ನಿಭಾಯಿಸಿಕೊಂಡು ಹೋಗುವ ಪಕ್ಷ ಅಧಿಕಾರಿಗಳ ನೇಮಕ ಮಾಡಬೇಕಾಗುತ್ತದೆ. ಯೋಜನೆಗಳ ಬಗ್ಗೆ ಒಳ್ಳೆಯ ಪರಿಕಲ್ಪನೆಯನ್ನು ಬುಡಕಟ್ಟುಗಳಿಗೆ ನೀಡಬೇಕಾಗುತ್ತಿದೆ.

"ಜಾಗತೀಕರಣ ಪ್ರವಾಹದಲ್ಲಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆ ಅಳಿಸಿ ಹೋಗಬಾರದು ಎಂಬುದು ಎಷ್ಟು ಮುಖ್ಯವೋ, ಅವುಗಳು ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡು ಜನತಾಂತ್ರಿಕ ಬಹು ಸಂಸ್ಕೃತಿ ವ್ಯವಸ್ಥೆಯಲ್ಲಿ ಬದುಕನ್ನು ರೂಪಿಸಿಕೊಳ್ಳಬೇಕಾದದು ಅಷ್ಟೇ ಮುಖ್ಯವಾದುದಾಗಿದೆ. ಬುಡಕಟ್ಟುಗಳೂ ರಾಷ್ಟ್ರೀಯ ಪ್ರವಾಹದಲ್ಲಿ ಮುಳುಗಿ ಹೋಗಬೇಕು ಎಂಬುದೇ ಅಭಿವೃದ್ಧಿಯಲ್ಲಿ ಅವುಗಳ ಅನನ್ಯತೆಯ ಒಡಲಲ್ಲೆ ಅವರ ಬದುಕು ಉತ್ತಮವಾಗುವಂತೆ ಮಾಡುವುದೇ ಅಭಿವೃದ್ಧಿ ಬುಡಕಟ್ಟುಗಳ ಅನನ್ಯತೆಯನ್ನು ಜನತಂತ್ರದ ಪ್ರಕ್ರಿಯೆಗೆ ಮತ್ತು ಜನತಂತ್ರವನ್ನು ಸಾಂಸ್ಕೃತಿಗೆ ಪ್ರಕ್ರಿಯೆಗೆ ಒಳಪಡಿಸುವ ಅಗತ್ಯವಿದೆ. ಜನತಂತ್ರವಿಲ್ಲದೆ ಬಹುಸಂಸ್ಕೃತಿವಾದ ಉಳಿಯುವುದು ಸಾಧ್ಯವಿಲ್ಲ ಬಹುಸಂಸ್ಕೃತಿಯಿಲ್ಲದೆ ಬುಡಕಟ್ಟುಗಳ ಅನನ್ಯತೆಯನ್ನು ಜನತಂರ ಒಪ್ಪಿಕೊಳ್ಳಬೇಕು ಅಭಿವೃದ್ಧಿ

ಮೀಮಾಂಸೆಯು ಜನತಂತ್ರ ಹಾಗೂ ಸಾಂಸ್ಕೃತೀಕರಣ ಪ್ರಕ್ರಿಯೆಗೆ ಒಳಗಾಗಬೇಕಾಗಿದೆ.

ಬುಡಕಟ್ಟು ಜನಾಂಗದ ಅಭಿವೃದ್ಧಿಯ ಬಗ್ಗೆ ಸಮಗ್ರವಾಗಿ ಆಲೋಚಿಸುವ ಸರ್ಕಾರ ಅಥವಾ ಕೆಲವೊಂದು ಸಂಘಸಂಸ್ಥೆಗಳು ಅವರಲ್ಲಿರುವ ಮೂಲಭೂತ ಸಮಸ್ಯೆಗಳೇನು ಎಂಬುದರ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸಿ ಅವರ ಸಮಗ್ರ ಅಭಿವೃದ್ಧಿಯ ಕಡೆ ಗಮನ ಹರಿಸಬೇಕು.

1. ಅವರಲ್ಲಿರುವ ಬಡತನ, ಅನಕ್ಷರತೆ, ಔದ್ಯೋಗೀಕ ಅವಕಾಶದ ಕೊರತೆ ಮೂಲಭೂತ ಸೌಕರ್ಯದ ಕೊರತೆಯಿಂದಾಗಿ ಹಲವು ಸಮಸ್ಯೆ ಎದುರಿಸುವ ಬುಡಕಟ್ಟುಗಳನ್ನು ಮೇಲಕ್ಕೆತ್ತಲು ಪ್ರಯತ್ನಿಸಬೇಕಾಗಿದೆ.
2. ನಾಯಕತ್ವ ತರಬೇತಿ ನೀಡುವಂತೆ ಹಾಗೂ ಆ ಮೂಲಕ ಸ್ವಂತ ಉದ್ಯೋಗ ಪ್ರಾರಂಭಿಸಲು ಅನುಕೂಲವಾಗುವಂತಹ ನೀತಿ ರೂಪಿಸುವುದು.
3. ನಾಯಕತ್ವ ತರಬೇತಿ ವಾಸಿಸುವಂತಹ ಪ್ರದೇಶದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಅಭಿವೃದ್ಧಿ ಪಡಿಸಬೇಕು.
4. ಸುಲಭ ರೀತಿಯಲ್ಲಿ ಕಡಿಮೆ ಬಡ್ಡಿ ದರದಲ್ಲಿ ಸಾಲ ಸಿಗುವಂತೆ ಮಾಡಿ ಸಾಲಗಾರರು ಕಪಿ ಮುಷ್ಠಿಯಿಂದ ಬಡ ಜನರನ್ನು ರಕ್ಷಿಸುವುದು.
5. ಬ್ಯಾಂಕ್ ಮತ್ತು ಇನ್ನಿತರ ಹಣಕಾಸಿನ ಸಂಸ್ಥೆಗಳ ಮೂಲಕ ಸಾಲ ಪಡೆಯುವಂತೆ ಅನುಕೂಲ ಮಾಡಿಕೊಡುವುದು.
6. ಹೈನುಗಾರಿಕೆಯ ಬಗ್ಗೆ ಸೂಕ್ತಮಾಹಿತಿ ನೀಡುವುದು.

ಈ ಮೇಲಿನ ಮುಖ್ಯ ಅಂಶಗಳ ಬಗೆಗೆ ಯಾವ ಸ್ವಸಹಾಯ ಸಂಸ್ಥೆಗಳು ಕಾಳಜಿಯಿಂದ ಕೆಲಸಮಾಡುತ್ತಿವೆಯೇ? ಎಂಬ ಪ್ರಶ್ನೆಗೆ ಶೂನ್ಯ ಉತ್ತರ ಸಿಗುತ್ತದೆ. ಬುಡಕಟ್ಟು ಜನರು ವಾಸಮಾಡುತ್ತಿರುವ ವಾಡೆಗಳಿಗೆ ನೇರವಾಗಿ ಭೇಟಿ ನೀಡಿ ಅವರ ಸಮಸ್ಯೆಗಳನ್ನು ಅರಿಯಬೇಕು. ಆಗ ಮಾತ್ರ ಅವರ ನಿಜವಾದ ಸಮಸ್ಯೆ ಏನು ಎಂಬುದು ಗೊತ್ತಾಗುತ್ತದೆ.

ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಕಾರ್ಯಗಳು ಅತ್ಯಂತ ದಯನೀಯ ಸ್ಥಿತಿಯಲ್ಲಿರುವವರೆಗೆ ಮತ್ತು ಸೌಲಭ್ಯದಿಂದ ವಂಚಿತರಾದವರಿಗೆ ತಲುಪುವಂತಾಗುವ ನಿಟ್ಟಿನ ಕೆಲಸಗಳನ್ನು ಮಾಡಲು ಅವಕಾಶವಾಯಿತು.ಸ್ವಯಂ ಸೇವಾ ಸಂಸ್ಥೆಗಳು ಮತ್ತು ಬುಡಕಟ್ಟು ಸಮುದಾಯಗಳ ನಡುವಣ ನಿಕಟ ಸಂಬಂಧವು ಸಹಭಾಗಿತ್ವದ ಭಾವನೆ ಬೆಳೆದು ಅಭಿವೃದ್ಧಿಯ ಕಡೆ ಸಮುದಾಯಗಳು ಮುಖಮಾಡಲು ಉಪಯುಕ್ತಕರವಾದವು ಸ್ವಯಂ ಸೇವಾ ಸಂಸ್ಥೆಗಳು ಸಮಾಜದ ವಿವಿಧ ಭಾಗಗಳ ಜನರ ಬವಣೆಗಳಿಗೆ ಧ್ವನಿಕೂಡಿಸಬೇಕೆಂದು ಒಂದು ಆರೋಗ್ಯಕರ ರಹದಾರಿ ಕಲ್ಪಿಸಬೇಕೆಂದು ನಿರೀಕ್ಷಿಸಲಾಗಿ 60 ರ ದಶಕದಲ್ಲಿಯೇ ಆಲೋಚಿಸಿರುವುದನ್ನು ಮರೆಯುವಂತಿಲ್ಲ. ಈ ಹಿನ್ನಲೆಯಿಂದ 1973 –76 ರಲ್ಲಿ ಸಾಮ್ರಾಜ್ಯ ಶಾಹಿ ರಾಷ್ಟ್ರಗಳಿಂದ ಧನಸಹಾಯ ಮತ್ತು ಮಾರ್ಗದರ್ಶನ

ಪಡೆದ ಎನ್ ಜಿ ಓ ಗಳು ಗ್ರಾಮೀಣಾಭಿವೃದ್ಧಿ ಸಮುದಾಯಾಭಿವೃದ್ಧಿ ಉದ್ಯೋಗ ಉತ್ಪಾದನೆ ಕೊಳೆಗೇರಿ ಸುಧಾರಣೆ. ಜೀವನ ಮಟ್ಟದಲ್ಲಿ ಸುಧಾರಣೆ ಮುಂತಾದ ಅಭಿವೃದ್ಧಿಗಳಿಗೆ ಹೆಚ್ಚು ಒತ್ತು ನೀಡುವುದನ್ನು ಸ್ವಯಂ ಸೇವಾ ಸಂಸ್ಥೆಗಳು ಮಾಡುತ್ತಲೇ ಬಂದಿವೆ.

ಸರ್ಕಾರದಿಂದ ಈಗಾಗಲೇ ಹಣ ಪಡೆಯುತ್ತಾ ಬಂದಿರುವ ಅಭಿವೃದ್ಧಿ ಕಾರ್ಯಕ್ರಮಗಳ ಜೊತೆಗೆ ಬುಡಕಟ್ಟು ಅಭಿವೃದ್ಧಿಕಾರ್ಯ ಮತ್ತು ಅತಿಕ್ರಮಣ ನೀತಿಯನ್ನು ಅಳವಡಿಸಲಾಯಿತು. ಯಾವುದೇ ಅಭಿವೃದ್ಧಿ ಕಾರ್ಯರೂಪಿಸುವಲ್ಲಿ ಒಂದು ಅಧೀಕೃತ ಇನ್ನೊಂದು ಸರಕಾರೇತರ ಎರಡು ವಲಯಗಳನ್ನು ಹುಟ್ಟುಕೊಂಡವು ಈ ಎರಡು ಸಂಸ್ಥೆಗಳಿಗೆ ಸಾಮ್ರಾಜ್ಯಶಾಹಿಯೇ ಹಣಕಾಸು ಹಾಗೂ ಇನ್ನಿತರ ನೆರವು ನೀಡುತ್ತಿರುವುದನ್ನು. ಅವಲೋಕಿಸಬಹುದಾಗಿದೆ. ದೇಶದ ಅಭಿವೃದ್ಧಿಯ ಬಗ್ಗೆ ಆಲೋಚಿಸಹೊರಟರೆ 60 ರ ದಶಕದಲ್ಲಿ ಪರಿಹಾರ, ಪುನರ್‌ವಸತಿ ಮತ್ತು ಉದಾರ ನೆರವಿಗೆ ಸಂಬಂಧಿಸಿದ ಯೋಜನೆಗಳಲ್ಲಿ ಸರ್ಕಾರೇತರ ವಲಯವನ್ನು ಹೆಚ್ಚಾಗಿ ಬಳಸಿಕೊಳ್ಳಲಾಯಿತು. ಅಭಿವೃದ್ಧಿ ಪ್ರಕ್ರಿಯೆಯನ್ನು ನಾವು ಚರ್ಚಿಸುತ್ತಾ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಬುಡಕಟ್ಟುಗಳ ಅಭಿವೃದ್ಧಿಯು ನಡೆದು ಬಂದ ದಾರಿಯನ್ನು ಅರ್ಥಮಾಡಿಕೊಳ್ಳಲೇ ಬೇಕಾಗಿದೆ. ಆದ್ದರಿಂದ ವಿಶ್ವಬ್ಯಾಂಕ್ ಮತ್ತು ಇತರ ಸಾಮ್ರಾಜ್ಯಶಾಹಿ ರಾಷ್ಟ್ರಗಳ ವಿವಿಧ ಏಜೆನ್ಸಿಗಳು. ಸಂಸ್ಥೆಗಳು ಅಧ್ಯಯನ ನಡೆಸಿ ತೃತೀಯ ರಾಷ್ಟ್ರಗಳಲ್ಲಿ ಯಾರು ಕಡುಬಡವರು ಎಂದು ಗುರುತಿಸಿ ಬುಡಕಟ್ಟುಗಳು. ನಗರದ ಬಡವರು ಕೊಳೆಗೇರಿಗಳಲ್ಲಿ ವಾಸಿಸುವರು ಅಸಂಘಟಿತ ಕಾರ್ಮಿಕರು ಮತ್ತು ಮಹಿಳೆಯರನ್ನು ಗುರುತಿಸಿ, ಇವರ ಅಭಿವೃದ್ಧಿಗಾಗಿ ದುಡಿಯಲು ಸ್ವಯಂಸೇವಾ ಸಂಸ್ಥೆಗಳಿಗೆ ಜವಾಬ್ದಾರಿಯನ್ನು ವಹಿಸಿದ್ದ ಬಗೆಯನ್ನು ನೆನಪಿಸಬಹುದು. ಈ ಹಿನ್ನಲೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಸಾಮ್ರಾಜ್ಯಶಾಹಿ ರಾಷ್ಟ್ರಗಳು ತಮ್ಮ ಪ್ರಭುತ್ವವನ್ನು ಬುಡಕಟ್ಟುಗಳು ಮತ್ತು ಸಮುದಾಯಗಳ ಮೇಲೆ ಬಲವಂತವಾಗಿ ಏರಿರುವುದನ್ನು ಕಾಣಬಹುದಾಗಿದೆ.

ಎರಡನೇ ಹಂತದಲ್ಲಿ ನಾವು ಚರ್ಚಿಸುವುದಾದರೆ ಸಾಮ್ರಾಜ್ಯವಾದಿ ಸಂಸ್ಥೆಗಳು ಮತ್ತು ಸ್ವಯಂ ಸಂಸ್ಥೆಗಳು ಜನತೆಯ ಮಧ್ಯೆ ಪ್ರವೇಶ ಮಾಡಲು ಮತ್ತು ಅಗತ್ಯವಿದ್ದರೆ ರಾಜಕೀಯಕ್ಕೆ ಧುಮುಕಲು ಅವಶ್ಯಕವಾದ ಸೈದ್ಧಾಂತಿಕ ತಳಹದಿಯನ್ನು ರೂಪಿಸಿಕೊಂಡಿರುವುದು ನಿಜ ಸಂಗತಿಯಾಗಿದೆ. ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿ ಮಾಡುತ್ತೇವೆ ಎಂದು ನಂಬಿಸುವುದರ ಮೂಲಕ ಯಾವುದೇ ಅಭಿವೃದ್ಧಿ ಕೆಲಸಗಳನ್ನು ಕಾರ್ಯಗತಗೊಳಿಸದೇ ಇರುವುದು ದುರಂತವೇ ಸರಿ. ಆದರೂ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಜನತಾ ಆಂದೋಲನ. ಜನಜಾಗೃತಿ ಮತ್ತು ಜನರ ಸಂಘಟನೆ ಮುಂತಾದವುಗಳಿಂದ ಕಾರ್ಯನಿರ್ವಾಹಿಸುತ್ತಿರುವು ಗಮನಾರ್ಹವಾದ ಸಂಗತಿ ಇದರಿಂದಾಗಿ ಶಿಕ್ಷಣ ಪ್ರಜ್ಞೆ, ಸಂಘಟನೆ, ಹೋರಾಟ ಮುಂತಾದ ಕಲ್ಪನೆಗಳು ಬುಡಕಟ್ಟುಗಳಲ್ಲಿ ರೂಪಗೊಂಡಿವೆ.

ಸ್ವಯಂ ಸೇವಾ ಸಂಸ್ಥೆಗಳು ಕಡುಬಡವರನ್ನು ಸಂಘಟಿಸಿ ಅವರಿಗೆ ಶಿಕ್ಷಣ ನೀಡಿ ಜಾಗೃತಿಗೊಳಿಸಿದರು. ಶೋಷಣೆ ವಿರುದ್ಧ ಹಾಗೂ ತಮ್ಮ ಹಕ್ಕುಗಳಿಗಾಗಿ ಹೋರಾಡಲೆಂದು ನಗರ ಮತ್ತು ಗ್ರಾಮೀಣ ಬಡವರನ್ನು ಸಂಘಟಿಸಲಿಕ್ಕಾಗಿ ಸಾಮ್ರಾಜ್ಯವಾದಿ ಸಂಸ್ಥೆಗಳು ಸರ್ಕಾರಗಳು ಮತ್ತು

ಧನಸಹಾಯ ನೀಡುವ ಸಂಘಟನೆಗಳು ಕಾರ್ಯನಿರ್ವಹಿಸಿದ ಬಗೆಯ ಅಭಿವೃದ್ಧಿಯ ಸಂಕೇತವಾಗಿದೆ. ಆದರೆ ಇಂದು ಭಾರತದಲ್ಲಿ ನಾವು ಕಾಣುತ್ತಿರುವ ಸಂಘಟನೆಗಳು ಮತ್ತು ಸರಕಾರೇತರ ಸಂಘಟನೆಗಳ ಸಿದ್ಧಾಂತಗಳಲ್ಲಿ ಹೆಚ್ಚಾಗಿ ವಿದೇಶಿಯ ಮೂಲದವುಗಳೆಂದು ತಿಳಿಯಬೇಕಾಗಿದೆ.

1960 ರಿಂದ 1970 ತಲೆ ಎತ್ತಿದ ಸ್ವಯಂ ಸಂಸ್ಥೆಗಳು ಶಿಕ್ಷಣ ತರಬೇತಿ. ಅಭಿವೃದ್ಧಿ ಕೆಲಸದಿಂದ ಹಿಡಿದು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಲಯಗಳಲ್ಲಿ ಹಸ್ತಕ್ಷೇಪ ಮಾಡುವುದರೊಂದಿಗೆ ಜನಸಂಘಟನೆ ಮಾಡುವುದನ್ನು ತಮ್ಮ ಗುರಿಯನ್ನಾಗಿಸಿಕೊಂಡವು. ಅಲ್ಲದೇ ಸ್ವಯಂ ಸೇವಾ ಸಂಸ್ಥೆಗಳು ದಾಖಲಾತಿ ಮತ್ತು ಸಂಶೋಧನೆಗೆ ಹೆಚ್ಚು ಒತ್ತಡ ನೀಡಿರುವುದು ತಿಳಿಯುತ್ತದೆ.

ಬುಡಕಟ್ಟುಗಳ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರ, ಕೇಂದ್ರ ಸರ್ಕಾರ ಅನೇಕ ಸ್ವಯಂ ಸೇವಾ ಸಂಸ್ಥೆಗಳು ವಿವಿಧ ಯೋಜನೆಗಳನ್ನ ರೂಪಿಸಿ ಕಾಂಕ್ರೀಟ್ ಸಂಸ್ಕೃತಿಯನ್ನು ಬುಡಕಟ್ಟುಗಳ ನಾಡಿಗೆ ಪರಿಚಯಿಸಿದ್ದವು. ಪರಿಣಾಮವಾಗಿ ಬುಡಕಟ್ಟುಗಳ ಬದುಕಿನ ಕ್ರಮಗಳು ರೂಪಾಂತರಗೊಳ್ಳತೊಡಗಿದವು ಬುಡಕಟ್ಟುಗಳನ್ನು ಸರ್ಕಾರ ಕಾಡಿನಿಂದ ಬೇರೆ ಬೇಋಎ ಸ್ಥಳಗಳಿಗೆ ಸ್ಥಳಾಂತರಿಸಿತು. ಈ ಪರಿಣಾಮ ಅನೇಕ ಸಮಸ್ಯೆಗಳು ಉದ್ಭವಿಸಿದವು. ಆಧುನಿಕ ಸಮಾಜದಲ್ಲಿ ಸಮುದಾಯಗಳ ಬದುಕು ಅತ್ಯಂತ ಜಟಿಲವಾಯಿತು. ಬುಡಕಟ್ಟುಗಳು ಆಧುನಿಕ ಸಮಾಜದಲ್ಲಿ ತಮ್ಮ ಬದುಕು ರೂಪಿಸಿಕೊಳ್ಳಲು ಅನುಕೂಲವಾಗುವಂತಹ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಹಲವಾರು ಯೋಜನೆಗಳನ್ನು ಸರ್ಕಾರ ಮತ್ತು ಸ್ವಯಂತ ಸೇವಾ ಸಂಸ್ಥೆಗಳು ಪ್ರಕಟಿಸಿದವು. ಬುಡಕಟ್ಟುಗಳ ವಸತಿ, ಶಿಕ್ಷಣ, ಆರೋಗ್ಯ ಕೃಷಿ, ಗೃಹಕೈಗಾರಿಕೆ ಕಾಡಿನ ಉತ್ಪನ್ನಗಳ ಸಂಗ್ರಹ ಪರಿಷ್ಕರಣೆ. ಮಾರಾಟ ಮುಂತಾದವುಗಳ ಬಗೆಗೆ ಅನೇಕ ಆಲೋಚನೆಗಳನ್ನು ಅನುಷ್ಠಾನಗೊಳಿಸುವುದರ ಮೂಲಕ ಅನೇಕ ತರಬೇತಿಗಳನ್ನು ನೀಡಿ ಸ್ವಾವಲಂಬಿತಗಳಾಗಿ ಬದುಕಲು ಅನುಕೂಲ ಯಾವುದು ಮಾಡಿಕೊಡುತ್ತಿದೆ. ಆದರೆ ಈ ಯೋಜನೆಗಳು ಬುಡಕಟ್ಟುಗಳಿಗೆ ಮುಟ್ಟುತ್ತಿಲ್ಲ. ಈ ಅಭಿವೃದ್ಧಿ ಯೋಜನೆಗಳನ್ನು ಪಡೆದುಕೊಂಡ ಕೆಲ ಬುಡಕಟ್ಟುಗಳು ತಮ್ಮ ಬದುಕನ್ನು ರೂಪಿಸಿಕೊಳ್ಳಲಾಗಿದೇ ಮತ್ತೆ ಮೊದಲಿನ ವ್ಯವಸ್ಥೆಯಲ್ಲಿಯೇ ಮುಂದುವರೆಯುತ್ತಿವೆ. ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಯೋಜನೆಗಳ ಫಲಿತಾಂಶ ಮಾತ್ರ ಶೂನ್ಯ ಸರ್ಕಾರ ಮತ್ತು ಎನ್‌ಟಿಒಗಳು ಜಾರಿಗೆ ತಂದಿರುವ ಯೋಜನೆಗಳ ಲಾಭಗಳನ್ನು ಸಮುದಾಯಗಳನ್ನು ಎಷ್ಟರಮಟ್ಟಿಗೆ ಪಡೆದುಕೊಂಡಿವೆ ಎಂಬುದನ್ನು ಚರ್ಚಿಸಬೇಕಾಗಿದೆ.

ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಯೋಜನೆಗಳು ಎಲ್ಲಾ ಬುಡಕಟ್ಟುಗಳಿಗೂ ಸಮಪ್ರಮಾಣದಲ್ಲಿ ದೊರೆಯಬೇಕಾಗಿದೆ. ಈ ಜನರ ಅಭಿವೃದ್ಧಿಯ ಕಡೆ ಮೊದಲು ಗಮನಹರಿಸಬೇಕು.

ಬುಡಕಟ್ಟು ಜನರ ಮಕ್ಕಳ ಆರೋಗ್ಯ ಮತ್ತು ಅಭಿವೃದ್ಧಿ ಯೋಜನೆಯಡಿಯಲ್ಲಿ ಶೀಶಿರಿಮೆ ಕಡಿಮೆ ಮಾಡಿ ಕುಟುಂಬ ಯೋಜನೆಗೆ ತಿಳುವಳಿಕೆ ನೀಡುವುದು ಸುರಕ್ಷಿತ ಮಾತೃತ್ವ ಕಲ್ಪನೆ ನೀಡುವುದು. ಮಕ್ಕಳ ಬಗೆಗೆ ವಿಶೇಷ ಕಾಳಜಿ ವಹಿಸುವುದು. ಗರ್ಭಿಣಿಯರಿಗೆ ತಿಳುವಳಿಕೆ ನೀಡುವುದು. ಲೈಂಗಿಕತೆಯಿಂದ ಹರಡುವ ರೋಗಗಳ ಬಗೆಗೆ ಮಾಹಿತಿ ನೀಡುವುದನ್ನು ಸ್ವಯಂ ಸೇವಾ ಸಂಸ್ಥೆಗಳು ಮಾಡುತ್ತಿರುವುದು ಗಮನಾರ್ಹವಾದ ಕೆಲಸವಾಗಿದೆ. ಹೀಗೆ ಆದಿವಾಸಿಗಳ ಅಭಿವೃದ್ಧಿಗಾಗಿ ನೂರಾರು ಸ್ವಯಂ ಸೇವಾ ಸಂಸ್ಥೆಗಳು ತಮ್ಮದೇ ಆದ ಗುರಿಗಳನ್ನಿಟ್ಟುಕೊಂಡು ಆದಿವಾಸಿಗಳ ಮೂಲಭೂತ ಸಮಸ್ಯೆಗಳನ್ನು ಪರಿಹರಿಸುವುದರ ಮೂಲಕ ಅವರನ್ನು ಮುಖ್ಯವಾಹಿನಿಯ ಕಡೆಗೆ ತರುತ್ತಿದ್ದವೆಂದು ಹಲವಾರು ಕಾರ್ಯಸೂಚಿಗಳನ್ನು ತೋರಿಸುತ್ತಿವೆ. ಆದರೆ ಆದಿವಾಸಿಗಳು ಇಂದು ನೆಲೆ ನಿಂತಿರುವ ಪ್ರದೇಶಗಳಿಗೆ ಹೋಗಿ ನೋಡಿದರೆ ಸರ್ಕಾರದ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಯೋಜನೆಗಳು ಅಲ್ಪ ಪ್ರಮಾಣದಲ್ಲಿ ನಡೆದಿರುವುದು ಕಂಡುಬರುತ್ತದೆ. ಈ ರೀತಿಯ ಅಸಮರ್ಪಕ ಅಭಿವೃದ್ಧಿಗೆ ಸ್ವಯಂ ಸೇವಾ ಸಂಸ್ಥೆಗಳು ಕ್ರಿಯಾಶೀಲವಾದ ಕೆಲಸಗಳನ್ನು ಮಾಡುತ್ತಿಲ್ಲವೆಂಬುದು ಗೊತ್ತಾಗುತ್ತಿದೆ. ಆದ್ದರಿಂದ ಮೈರಾಡ ಸಂಸ್ಥೆಯು ಬಳ್ಳಾರಿಯಲ್ಲಿ ಅನೇಕ ಸ್ಥಳಗಳಲ್ಲಿ ತನ್ನ ಕೇಂದ್ರದ ಕಛೇರಿಗಳನ್ನು ಪ್ರಾರಂಭಿಸಿ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿ ಪಡಿಸಲು ಹಲವಾರು ಯೋಜನೆಗಳನ್ನು ರೂಪಿಸಿದೆ.

ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು ಗಿರಿಜನ ಉಪಯೋಜನೆಯನ್ನು 1976–77 ರಲ್ಲಿ ಪ್ರಾರಂಭಿಸಿತು. ಅಲ್ಲದೆ ಸಮಗ್ರ ಬುಡಕಟ್ಟು ಅಭಿವೃದ್ಧಿ ಯೋಜನೆ (ಐಟಿಡಿಪಿ) ಕೇಂದ್ರಗಳನ್ನು ಬುಡಕಟ್ಟುಗಳ ಅಭಿವೃದ್ಧಿಗಾಗಿಯೇ 1992 ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೂ ವಿಸ್ತರಿಸಿರುವುದನ್ನು ಕಾಣಬಹುದಾಗಿದೆ. ಈ ರೀತಿಯ ಯೋಜನೆಗಳ ಜೊತೆಗೆ ಸ್ವಯಂ ಸೇವಾ ಸಂಸ್ಥೆಗಳು ಕೈಜೋಡಿಸುವುದರ ಮೂಲಕ ಬುಡಕಟ್ಟುಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವುದು ಕಂಡುಬರುತ್ತದೆ.

ಬುಡಕಟ್ಟುಗಳ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆ ಬರಲು ಸಹಕಾರಿಯಾಗುವಂತಹ ಸವಲತ್ತುಗಳನ್ನು ಒದಗಿಸುತ್ತಿದ್ದಾರೆ. ಹಾಗೂ ಬುಡಕಟ್ಟು ಸಮುದಾಯಗಳ ಕಲೆ ಮತ್ತು ಸಂಸ್ಕೃತಿಗಳನ್ನು ಕಾಪಾಡಲು ಸಹಕಾರಿಯಾಗುವಂಥಹ ಅನೇಕ ನಿಯಮಗಳನ್ನು ರೂಪಿಸಿದೆ ಇವುಗಳೆಲ್ಲವೂ ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿಯ ಕಡೆಗೆ ತರುವ ಪ್ರಯತ್ನಮಾಡಲಾಗಿದೆ. ಆದ್ದರಿಂದ ಪರಿಶಿಷ್ಟ ವರ್ಗದ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಬುಡಕಟ್ಟು ಜನರ ಹಿತಾಸಕ್ತಿಗಳನ್ನು ರಕ್ಷಿಸಲು ಕಾನೂನು ಕಾಯ್ದೆಯ ಬೆಂಬಲ ಒದಗಿಸಲಾಗುತ್ತಿದೆ.

ಬುಡಕಟ್ಟುಗಳ ಅಭಿವೃದ್ಧಿಗಾಗಿ ಕೃಷಿ ತೋಟಗಾರಿಕೆ. ಮೀನುಗಾರಿಕೆ, ಪಶುಸಂಗೋಪನೆ, ಅರಣ್ಯ ಮತ್ತು ಸಣ್ಣ ಕೈಗಾರಿಕೆ, ರೇಷ್ಮೆ ಕೃಷಿ, ಉದ್ಯೋಗ ತರಬೇತಿ,ವಸತಿ, ಶಿಕ್ಷಣ ಮುಂತಾದ ಸೌಲಭ್ಯಗಳನ್ನು ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಕಲ್ಪಿಸಿಕೊಂಡಿರುವುದರ ಮೂಲಕ ಬುಡಕಟ್ಟು

ಸಮುದಾಯಗಳನ್ನು ಸುವ್ಯವಸ್ಥಿತವಾಗಿ ಜೀವನ ಮಾಡಲು ಸಹಕಾರ ನೀಡುತ್ತಿರುವುದ ಇಂದು ಗಮನಾರ್ಹವಾದ ಸಂಗತಿಯಾಗಿದೆ.

ಭಾರತದಾದ್ಯಂತ 15 ಬುಡಕಟ್ಟು ಸಂಶೋಧನಾ ಕೇಂದ್ರಗಳಿವೆ ಆಂದ್ರ ಪ್ರದೇಶ. ಅಸ್ಸಾಂ ಗುಜರಾತ್, ಕೇರಳ, ಮಧ್ಯಪ್ರದೇಶ, ಮಹಾರಾಷ್ಟ್ರ ಒರಿಸ್ಸಾ ರಾಜಸ್ಥಾನ ತಮಿಳುನಾಡು ಪಶ್ಚಿಮ ಬಂಗಾಳ ಉತ್ತರ ಪ್ರದೇಶ ಮಣಿಪುರ, ತ್ರಿಪುರ, ಮತ್ತು ಅಂಡಮಾನ್, ನಿಕೋಬಾರ್ ದ್ವೀಪಗಳನ್ನು ಸ್ಥಾಪಿಸಲಾಗಿದೆ. ಈ ಸಂಶೋಧನಾ ಕೇಂದ್ರಗಳು ಬುಡಕಟ್ಟು ಸಮುದಾಯದ ಅಭಿವೃದ್ಧಿಗೆ ಬೇಕಾಗುವ ಯೋಜನೆಗಳನ್ನು ರಾಜ್ಯ ಸರ್ಕಾರಗಳಿಗೆ ಒದಗಿಸುತ್ತವೆ. ಇದರ ಜೊತೆಗೆ ಬುಡಕಟ್ಟು ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನೆಗಳನ್ನು ಹಾಗು ಅನುಷ್ಠಾನಗೊಳಿಸಿರುವ ಯೋಜನೆಗಳ ಮೌಲ್ಯ ಮಾಪನ ಮತ್ತು ಅಂಕಿ ಸಂಖ್ಯೆಗಳ ಸಂಗ್ರಹಣೆಯ ಕಾರ್ಯವನ್ನು ನಿರ್ವಹಿಸುತ್ತವೆ. ಇದರ ಜೊತೆಗೆ ತರಬೇತಿ ಕಾರ್ಯಾಗಾರ ಕಮ್ಮಟಗಳನ್ನು ನಡೆಸುತ್ತಿವೆ. ಕಾಲಕ್ಕೆ ತಕ್ಕಂತೆ ಬುಡಕಟ್ಟು ಪರ ಸೇವಾ ಸಂಸ್ಥೆಗಳು ಚಿಂತಕರು, ಅಧ್ಯಯನ ಕೇಂದ್ರಗಳು ಬುಡಕಟ್ಟುಗಳ ಕುರಿತು ನೀಡುವ ಅವಶ್ಯಕ ಮಾಹಿತಿಗಳ ಮೇಲೆ ಬುಡಕಟ್ಟುಗಳ ಅಭಿವೃದ್ಧಿಗಾಗಿ ಹೊಸ ಯೋಜನೆಗಳು ರಚನೆಗೊಳ್ಳುತ್ತಿರುತ್ತವೆ. ಯೋಜನಾಬದ್ಧ ಅನುಷ್ಠಾನಗಳು. ಬುಡಕಟ್ಟುಗಳ ಅಭಿವೃದ್ಧಿಗೆ ಸಹಕಾರಿಯಾಗುತ್ತಿವೆ ಎಂದು ತಿಳಿಯಲಾಗಿದೆ.

ಆದಿವಾಸಿಗಳಿಗೆ ಏಕರೂಪದ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವುದನ್ನು ಮತ್ತು ಅಂತಹ ಯೋಜನೆಗಳನ್ನು ಕಾನೂನು ಬದ್ಧವಾಗಿ ಜಾರಿಗೊಳಿಸುವ ಪ್ರಕ್ರಿಯೆಯ ಬಗ್ಗೆ ಇಲ್ಲಿ ಚರ್ಚಿಸಲೇಬೇಕಾಗುತ್ತಿದೆ. ಈ ಹಿನ್ನಲೆಯಲ್ಲಿ ನಾವು ಅವಲೋಕಿಸುತ್ತಾ ಹೊರಟರ ಸಾಮಾಜಿಕವಾಗಿ ಆರ್ಥಿಕವಾಗಿ ಬುಡಕಟ್ಟುಗಳನ್ನು ಸಬಲೀಕರಿಸಬೇಕೆಂಬ ಉದ್ದೇಶ ಸರಕಾರದ ಯೋಜನೆಗಳಿಗೆ ಸಹಜವಾಗಿಯೇ ಇರುತ್ತದೆ. ಆದರೆ ಆದಿವಾಸಿಗಳಂತಹ ಅಸಾಯಕ ಸಮುದಾಯಗಳ ಸಮಸ್ಯೆಗಳು ಪ್ರದೇಶದಿಂದ ಪ್ರದೇಶಕ್ಕೆ ಜನಸಂಖ್ಯೆಗೆ ಅನುಗುಣವಾಗಿ ಭಿನ್ನವಾಗಿರುತ್ತವೆ. ಸರ ಬುಡಕಟ್ಟುಗಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಹಾಕಿಕೊಂಡಿರುತ್ತದೆ. ಆದರೆ ಈ ಯೋಜನೆಗಳು ಬುಡಕಟ್ಟುಗಳಿಗೆ ಗೊತ್ತಿಲ್ಲದಂತೆಯೇ ರೂಪುಗೊಂಡಂತವುಗಳು ಯೋಜನೆಗಳ ಬಗ್ಗೆ ಸರಿಯಾದ ಮಾಹಿತಿ ಈ ಬುಡಕಟ್ಟುಗಳಿಗೆ ನೀಡದೆ ಇರುವುದು ದೊಡ್ಡ ದುರಂತವಾಗಿದೆ.

ಒಟ್ಟಿನಲ್ಲಿ ಬುಡಕಟ್ಟು ಜನರ ಬೆಳವಣಿಗೆಯ ಬಗ್ಗೆ ಸರ್ಕಾರವಾಗಲಿ, ಹಲವು ಸಂಘ ಸಂಸ್ಥೆಗಳಾಗಲಿ ಅವರ ಸಾಂಸ್ಕೃತಿಕ ಅನನ್ಯತೆಯ ಬಗ್ಗೆ ಸೂಕ್ತವಾದ ರೀತಿಯಲ್ಲಿ ಮನಗಂಡು, ಅಭಿವೃದ್ಧಿ ಪರವಾದ ಯೋಜನೆಗಳನ್ನು ಹಾಕಿಕೊಳ್ಳಬೇಕು ನಗರ ಪಟ್ಟಣಗಳಿಂದ ಬಹೂ ದೂರದ ದಟ್ಟವಾದ ಅರಣ್ಯಗಳಲ್ಲಿ ವಾಸಿಸುವ ಬುಡಕಟ್ಟುಗಳ ಏಳ್ಗೆಗಾಗಿ ಸ್ವಸಹಾಯ ಗುಂಪುಗಳು ಶ್ರಮವಹಿಸಿ ಅವರನ್ನು ಪ್ರಗತಿ ಪರರನ್ನಾಗಿ ಮಾಡುವುದು ಇಂದಿನ ದಿನಮಾನಗಳಲ್ಲಿ ಮಹತ್ವ ಅಂಶಗಳಲ್ಲಿ ಒಂದಾಗಿದೆ. ಕೆಲವೊಂದು ಸಂಘ–ಸಂಸ್ಥೆಗಳು ಬುಡಕಟ್ಟುಗಳನ್ನು ಸಮಾಜದ ಮುಖ್ಯವಾಹಿನಿಗೆ ತರಲು ತುಂಬಾ ಶ್ರಮವಹಿಸಬೇಕಾಗಿದೆ.

# ಸಮಾರೋಪ

ಭಾರತದ ಅಂತಃಸತ್ವದ ಬಹುತ್ವವನ್ನು ಗೌರವಿಸುವ ಮತ್ತು ಇಲ್ಲಿನ ವಿಷಮ ಸಾಮಾಜಿಕ ವ್ಯವಸ್ಥೆಯನ್ನು ನಿವಾರಿಸುವ ನಿಟ್ಟಿನಲ್ಲಿ ನಮ್ಮ ಆಡಳಿತ ವ್ಯವಸ್ಥೆ ಡೆಮಾಕ್ರಟಿಕ್ ಆಗಿ ಯೋಚಿಸುತ್ತಿಲ್ಲ ಅದು ಬುಡಕಟ್ಟುಗಳ ಹಕ್ಕುಗಳ ಕುರಿತಾಗಿ ಆದಿವಾಸಿಗಳ ಅಸ್ತಿತ್ವದ ಕುರಿತು ಯೋಚಿಸುವಾಗಲೆಲ್ಲಾ ಅಸ್ತಿತ್ವದ ಉಳಿಗಮಾನ್ಯ ಮನಸ್ಥಿತಿಯಲ್ಲಿಯೇ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾನೆ. ನ್ಯಾಯಲಗಳ ತೀರ್ಮಗಳು ತೀರ್ಮ ರಾಷ್ಟ್ರೀಯ ಮತ್ತು ಮಾನವ ಹಕ್ಕುಗಳ ಆಯೋಗದ ಚಿಂತನೆಗಳಲ್ಲಿ ಆದಿವಾಸಿಗಳ ಹಕ್ಕುಗಳ ಕುರಿತು ನಮ್ಮ ಸರಕಾರಗಳನ್ನು ಗಮನ ಸೆಳೆಯುತ್ತಲೆ ಇರುವುದು. ಗೋಚರಿಸುತ್ತದೆ.

ಭಾರತದಲ್ಲಿ ಪ್ರಜಾತಂತ್ರ ವ್ಯವಸ್ಥೆ ತನ್ನನ್ನು ಜೀವಂತವಾಗಿಸಿಕೊಳ್ಳಲೆತ್ನಿಸಿದಾಗಲೆಲ್ಲ ಇಲ್ಲಿನ ಉಳಿಗಮಾನ್ಯ ಮತ್ತು ಬಂಡವಾಳಶಾಹಿ ಪ್ರವೃತ್ತಿಗಳು ತಮ್ಮ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುತ್ತಾ ಜನತಾಂತ್ರಿಕ ಆಶಯಗಳನ್ನು ನಾಶ ಮಾಡುತ್ತಲೆ ಬಂದಿವೆ. ಇನ್ನು ಜಾಗತೀಕರಣದಿಂದಾಗಿ ಭಾರತದಂತಹ ದೇಶಗಳಲ್ಲಿ ನಡೆಯುತ್ತಿರುವ ರೂಪಾಂತರಗಳನ್ನು ಎಲ್ಲರ ಕಣ್ಣ ಮುಂದಿವೆ. ಮೂರನೇ ಜಗತ್ತಿನ ಆಡಳಿತ ವ್ಯವಸ್ಥೆಯನ್ನು ಸಾಮ್ರಾಜ್ಯಶಾಹಿಗಳು ನೇರವಾಗಿ ನಿಯಂತ್ರಿಸುತ್ತಿದ್ದಾರೆ. ಭಾರತದಂತಹ ವೈವಿದ್ಯಮಯವಾದ ಸಮೂಹಗಳ ದೇಶದಲ್ಲಿ ಜಾಗತೀಕರಣ ಹಲವು ರಾಜಕೀಯ ವೈರುದ್ಧಗಳನ್ನು ಹುಟ್ಟುಹಾಕಿದೆ. ಈ ವೈರುದ್ಧಗಳನ್ನು ಸಮರ್ಥಿಸುವಾಗಲೆಲ್ಲ ಸರಕಾರಗಳು ರಾಷ್ಟ್ರಪ್ರೇಮ ರಾಷ್ಟ್ರೀಯ ಹಿತಾಸಕ್ತಿ ಎಂಬ ಹುಸಿಭ್ರಮೆಗಳನ್ನು ಮುಂದು ಮಾಡುತ್ತವೆ. ಈ ಹುಸಿ ಭಯಗಳ ಹಿಂದೆ ಇಲ್ಲಿನ ಬಂಡವಾಳ ಶಾಹಿಗಳ ಮತ್ತು ಸಾಮ್ರಾಜ್ಯಶಾಹಿಗಳ ಹುನ್ನಾರಗಳಿವೆ ಒಂದು ಮರ ಕಡಿಯುವುದನ್ನು ಕೊಲೆ ಮಾಡುವ ಅಪರಾಧಕ್ಕೆ ಹೋಲಿಸಿ ಅರಣ್ಯಕ್ಕಾಗಿ ಮರಗುವ  ಆದಿವಾಸಿಗಳಿಗೆ ಯುವ ಕಡಿಯುವುದನ್ನು ಕೊಲೆ ಮಾಡುವ ಅಪರಾಧಕ್ಕೆ ಹೋಲಿಸಿ ಅರಣ್ಯಕ್ಕಾಗಿ ಮರುಗುವ ಆದಿವಾಸಿಗಳಿಗೆ ಯುವ ಕಾಯ್ದೆ ಕಾನೂನುಗಳು ಅರಣ್ಯಾ ರಕ್ಷಿಸುವ ಪಾಥ ಹೇಳಿ ಕೊಡಬೇಕಿಲ್ಲ ಯಾವ ಸರಕಾರಗಳಿಗೂ ಹೊರೆಯಾಗದೆ ದುಡಿದು ನಿತ್ಯ ತಮ್ಮ ಬವಣೆಗಳಿಗೆ ತಾವೇ ಮುಖಾಮುಖಿಯಾಗುವ ಆದಿವಾಸಿಗಳಂತಹ ಶ್ರಮಿಕ ವರ್ಗಕ್ಕೆ ರಾಷ್ಟ್ರದ ಹಿತಾಸಕ್ತಿ ಮತ್ತು ರಾಷ್ಟ್ರಪ್ರೇಮಗಳ ಕುರಿತು ನಾಗರೀಕ ಪ್ರಪಂಚ ಏನನ್ನು ಹೇಳಿಕೊಡಬೇಕಿಲ್ಲ ಇವೆಲ್ಲವುಗಳ ಹಿನ್ನಲೆಯನ್ನು ಅವಲೋಕಿಸಿದಾಗ 1975 –76 ರಲ್ಲಿ ಸಾಮ್ರಾಜ್ಯಶಾಹಿ ರಾಷ್ಟ್ರಗಳಿಂದ ಧನಸಹಾಯ ಮತ್ತು ಮಾರ್ಗದರ್ಶನ ಪಡೆದು ಸಂಸ್ಥೆಗಳು ಗ್ರಾಮೀಣಾಭಿವೃದ್ಧಿ ಸಮುದಾಯ ಅಭಿವೃದ್ಧಿ ಉದ್ಯೋಗ ಉತ್ಪಾದನೆ ಸುಧಾರಣೆ ಜೀವನ ಮಟ್ಟದಲ್ಲಿ ಸುಧಾರಣೆ ಮುಂತಾ ಅಭಿವೃದ್ಧಿಗಳಿಗೆ ಹೆಚ್ಚು ಒತ್ತು ನೀಡಿದ್ದವೆ. ವಿಶ್ವಬ್ಯಾಂಕ್ ಮತ್ತು ಇತರೆ ಸಾಮ್ರಾಜ್ಯಶಾಹಿ ರಾಷ್ಟ್ರಗಳ ವಿವಿಧ ಸ್ವಯಂ ಸೇವಾ ಸಂಸ್ಥೆಗಳು ಅಧ್ಯಯನ ನಡೆಸಿ ತೃತೀಯ ರಾಷ್ಟ್ರಗಳಲ್ಲಿ ಮರು ಕಡುಬಡವರು ಎಂದು ಗುರುತಿಸಿ ಈ ಅಧ್ಯಯನದಲ್ಲಿ ಕೃಷಿ ಕಾರ್ಮಿಕರು, ಹರಿಜನರು, ಬುಡಕಟ್ಟುಗಳ, ನಗರದ ಬಡವರು ಕೊಳಗೇರಿಗಳಲ್ಲಿ ವಾಸಿಸುವರು. ಅಸಂಸ್ಕೃತತೆ ಕಾರ್ಮಿಕರು ಮತ್ತು ಮಹಿಳೆಯರೆಂದು ಗುರುತಿಸಿ ಇವರ

ಅಭಿವೃದ್ಧಿಗಾಗಿ ಸ್ವಯಂ ಸೇವಾ ಸಂಸ್ಥೆಗಳು ದುಡಿಯುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ.

ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟು ಮಧ್ಯಪ್ರವೇಶಮಾಡಿ ಜನತಾ ಆಂದೋಲನಾ ಜನಜಾಗೃತಿ ಮತ್ತು ಜನರ ಸಂಘಟನೆ, ಹೋರಾಟ ಮುಂತಾದ ಕಲ್ಪನೆಗಳು ರೂಪುಗೊಂಡಿವೆ ಕಡುಬಡವರನ್ನು ಸಂಘಟಿಸಿ ಅವರಿಗೆ ಶಿಕ್ಷಣ ನೀಡಲು ಸ್ವಯಂ ಸೇವಾ ಸಂಸ್ಥೆಗಳು ಮುಂದಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ ಶೋಷಣೆಯ ವಿರುದ್ಧ ಹಾಗೂ ತಮ್ಮ ಹಕ್ಕುಗಳಿಗಾಗಿ ಹೊರಡಲೆಂದು ನಗರ ಮತ್ತು ಗ್ರಾಮೀಣ ಬಡವರನ್ನು ಸಂಘಟಿಸಲಿಕ್ಕಾಗಿ. ಸಾಮ್ರಾಜ್ಯವಾದಿ ಸಂಸ್ಥೆಗಳು ಸರಕಾರಗಳು ಮತ್ತು ಧನಸಹಾಯ ನೀಡುವ ಸಂಘಟನೆಗಳು ಕಾರ್ಯನಿರ್ವಹಿಸುತ್ತಿವೆ. ಗಿರಿಜನರ ಅಭಿವೃದ್ಧಿಗಾಗಿ ರಾಜ್ಯ ಸರಕಾರ ಕೇಂದ್ರಸರಕಾರ ಅನೇಕ ಸ್ವಯಂ ಸೇವಾ ಸಂಸ್ಥೆಗಳು ವಿವಿಧ ಯೋಜನೆಗಳನ್ನು ರೂಪಿಸಿದೆ ಇದರಿಂದ ಗಿರಿಜನರ ಬದುಕಿನ ಕ್ರಮಗಳು ಬದಲಾಗತೊಡಗಿವೆ. ಗಿರಿಜನರು ಮತ್ತು ಅಲೆಮಾರಿಗಳು ಆಧುನಿಕ ಸಮಾಜದಲ್ಲಿ ತಮ್ಮ ಬದುಕು ರೂಪಿಸಿಕೊಳ್ಳಲು ಅನುಕೂಲವಾಗುವಂತಹ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ನಿರ್ಧರಿಸಿ ಯೋಜನೆಗಳನ್ನು ಸರಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಗಿರಿಜನರು ಮತ್ತು ಅಲೆಮಾರಿಗಳಿಗೆ ವಸತಿ, ಶಿಕ್ಷಣ ಆರೋಗ್ಯ ಕೃಷಿ,ಗೃಹ, ಕೈಗಾರಿಕೆ ಕಾಡಿನ ಉತ್ಪನ್ನಗಳ ಸಂಗ್ರಹ ಪರಿಷ್ಕರಣೆ ಮಾರಾಟ ಘುಂತಾದವುಗಳನ್ನು ಕುರಿತು ಬುಡಕಟ್ಟುಗಳಿಗೆ ಮನವರಿಕೆ ಮಾಡುತ್ತಿರುವುದು ಕಂಡುಬಂದಿದೆ. ಈ ರೀತಿಯಾ ಅಭಿವೃದ್ಧಿ ಯೋಜನೆಗಳನ್ನು ಪಡೆದುಕೊಂಡ ಕೆಲಗಿರಿಜನ ಪಲಾನುಭವಿಗಳಿಗೂ ತಮ್ಮ ಬದುಕನ್ನು ರೂಪಿಸಿಕೊಳ್ಳಲಾಗದೆ ಮತ್ತೆ ಮೊದಲಿನ ವ್ಯವಸ್ಥೆಯಲ್ಲಿಯೇ ಮುಂದುವರೆಯುತ್ತಿರುವುದು ಕಂಡುಬಂದಿದೆ. ಸಂಸ್ಥೆಗಳು ಜಾರಿಗೆ ತಂದಿರುವ ಯೋಜನೆ ಲಾಭಗಳನ್ನು ಬುಡಕಟ್ಟು ಕಂಡುಬಂದಿದೆ ಸಂಸ್ಥೆಗಳು ಜಾರಿಗೆ ತಂದಿರುವ ಯೋಜನೆಗಳ ಲಾಭಗಳನ್ನು ಬುಡಕಟ್ಟು ಸಮುದಾಯಗಳು ಮತ್ತು ಅಲೆಮಾರಿಗಳು ಪಡೆಯುತ್ತಿವೆ ಎಂದು ಹೇಳಲಾಗುವುದು.

ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಸರಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ರೂಪಿಸಿರುವ ಅಭಿವೃದ್ಧಿ ಯೋಜನೆಗಳು ಎಲ್ಲಾ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳನ್ನು ಸಮಪ್ರಮಾಣದಲ್ಲಿ ಹಂಚಿಕೆಯಾಗಿದೆ ಇರುವ ಸಂಗತಿ ಮಾತ್ರ ನಿಜವಾಗಿದೆ. ಈ ಯೋಜನೆಗಳು ಎಲ್ಲಿ ಸೋರಿಕೆಯಾಗುತ್ತಿವೆ. ಹಾಗೂ ಯಾವ ಹಂತದಲ್ಲಿ ನಡೆಯುತ್ತಿದೆ ಎಂಬುದರ ಕಡೆ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಬುಡಕಟ್ಟು ಸಮುದಾಯದ ಪ್ರತಿಯೊಂದು ಮನೆಗೆ ಭೇಟಿನೀಡಿ ಆ ಸಮುದಾಯಕ್ಕೆ ಇಲ್ಲಿಯವರೆಗೆ ಸರಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಜಾರಿ ಮಾಡಿರುವ ಯೋಜನೆಗಳನ್ನು ತಿಳಿದು ಚರ್ಚಿಸಲಾಗಿದೆ. ಆದಿವಾಸಿಗಳ ಸಂಸ್ಕೃತಿ ಸಂಪ್ರದಾಯ ಪರಂಪರೆಯಿಂದ ಬಂದ ವಿಚಾರಗಳನ್ನು ಉಳಿಸಿ ಬೆಳೆಸುವ ಜವಾಬ್ದಾರಿಯನ್ನು ಇಟ್ಟುಕೊಂಡಿದೆ ಗಿಡ ಮೂಲಿಕೆ ಔಷಧಿ ಮತ್ತು ಪರಿಸರ ರಕ್ಷಣೆ ಮರಗಿಡ ಬೆಳೆಸುವುದು ಆರೋಗ್ಯದತ್ತ ಗಮನ ಹರಿಸುವಂತೆ ಸ್ವಯಂ ಸೇವಾ ಸಂಸ್ಥೆಗಳು ಬಳ್ಳಾರಿ ಜಿಲ್ಲೆಯಲ್ಲಿ ಅಲೆಮಾರಿಗಳು ಸಂಗಡ ಸುವ್ಯವಸ್ಥಿತವಾದ ಸೇತುವೆಯಂತೆ ಕೆಲಸ ನಿರ್ವಹಿಸುತ್ತವೆ.

ಸ್ವಯಂ ಸೇವಾ ಸಂಸ್ಥೆಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಬುಡಕಟ್ಟು ಕುಟುಂಬಗಳ ಅಭಿವೃದ್ಧಿ ಮತ್ತು ಆರ್ಥಿಕ ಅಭಿವೃದ್ಧಿಗೆ ಹೆಚ್ಚು ಗಮನ ಹರಿಸಿದ್ದಾರೆ. ಕ್ಷೇತ್ರಕಾರ್ಯ ಸಮಯದಲ್ಲಿ ಗಮನಿಸಿದಂತೆ ಮರಗಿಡಗಳಿಲ್ಲದೆ ಅರಣ್ಯ ಪ್ರದೇಶದ ಭೂಮಿಯನ್ನು ಸಾಗುವಳಿಗೆ ಸಿದ್ಧಪಡಿಸುವುದು ಬದುಗಳ ನಿರ್ಮಾಣ ನೀರು ನಿರ್ವಹಣೆ, ಬದುಗಳಲ್ಲಿ ಗಿಡಮರ ಬೆಳೆಸುವುದು, ಸಾವಯವ ಗೊಬ್ಬರ ತಯಾರಿಕೆ, ಆಹಾರ ಮತ್ತು ಆರ್ಥಿಕ ಬೆಳೆಗಳತ್ತ ಪ್ರೋತ್ಸಾಹ ಹಸು ಎಮ್ಮೆ ನೀಡುವುದನ್ನು ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟುಗಳಿಗೆ ತರಬೇತಿ ಮತ್ತು ಯೋಜನೆಗಳನ್ನು ತಲುಪಿಸುವ ಕೆಲಸವನ್ನು ಮಾಡುತ್ತವೆ ಬುಡಕಟ್ಟು ಸಮುದಾಯಗಳಿಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡುತ್ತಿರುವುದು ಕಂಡುಬಂದಿದೆ.

ಬುಡಕಟ್ಟು ಜನರ ಮಕ್ಕಳ ಆರೋಗ್ಯ ಮತ್ತು ಯೋಜನೆಯಡಿಯಲ್ಲಿ ಕೀಳರಿಮೆ ಕಡಿಮೆಮಾಡಿ ಕುಟುಂಬ ಯೋಜನೆಗೆ ತಿಳುವಳಿಕೆ ನೀಡುತ್ತವೆ. ಅಲ್ಲದೆ ಸುರಕ್ಷಿತ ಮಾತೃತ್ವ ಕಲ್ಪನೆ ಮಕ್ಕಳ ಬಗೆಗೆ ವಿಶೇಷವಾದ ಕಾಳಜಿ ಇದೆ. ಸ್ವಯಂಸೇವಾ ಸಂಸ್ಥೆಗಳು ಗರ್ಭಿಣಿಯರಿಗೆ ತಿಳುವಳಿಕೆ ಹಾಗೂ ಲೈಂಗಿಕತೆಯಿಂದ ಹರಡುವ ರೋಗಗಳ ಬಗೆಗೆ ಮಾಹಿತಿ ನೀಡಿ ಬುಡಕಟ್ಟುಗಳ ಅಭಿವೃದ್ಧಿಯ ಕಡೆ ಗಮನ ಹರಿಸಿವೆ. ಸ್ವಯಂ ಸೇವಾ ಸಂಸ್ಥೆಗಳು ವಿವಿಧ ಯೋಜನೆಗಳ ಅಡಿಯಲ್ಲಿ ಬುಡಕಟ್ಟುಗಳನ್ನು ಮುಖ್ಯವಾಹಿನಿಗೆ ತರುವಂತ ಕೆಲಸವನ್ನು ಮಾಡುತ್ತಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಆದ್ದರಿಂದ ಬುಡಕಟ್ಟು ಜನರ ಕಾಲೋನಿಗಳಿಗೆ ರಸ್ತೆಯ ಸಂಪರ್ಕ ಸೇತುವೆ ಹೊಸರಸ್ತೆ ಡಾಂಬರೀಕರಣ ಮಾಡಿಸುವ ಪರಿಪಾಟವಾಗಿದೆ. ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳನ್ನು ಮುಖಾಮುಖಿ ಸಂದರ್ಶನ ಮಾಡಿದ ಸಂದರ್ಭದಲ್ಲಿ ಗಮನಿಸಿದಂತೆ ಹಾಗೂ ಪಡೆದ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಚರ್ಚಿಸುವುದಾದರೆ ಹಸಿರು ಕಾರ್ಡುಗಳನ್ನು ವಿತರಣೆ ಮಾಡಿದ್ದಾರೆ ಹಾಗೂ ಕಡಿಮೆ ಬೆಲೆಗೆ ಸೀರೆ ಧೋತಿಯನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವುದು ಕೊಂಡುಕೊಳ್ಳಲಾಗಿದೆ.

ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟುಗಳ ಮತ್ತು ಅಲೆಮಾರಿಗಳ ನಿರುದ್ಯೋಗ, ವಿದ್ಯಾವಂತ ಯುವಕ ಯುವತಿಯರಿಗೆ ವಿವಿಧ ವೃತ್ತಿಗಳಲ್ಲಿ ನೈಪುಣ್ಯತೆ ಪಡೆಯಲು ಸಹಾಯಕವಾಗುವಂತೆ ವೃತ್ತಿ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಿ ಬಳ್ಳಾರಿ ಜಿಲ್ಲೆಯಲ್ಲಿ ಬುಡಕಟ್ಟುಗಳಿಗೆ ದಾರಿದೀಪವಾಗಿದೆ.

ಬಳ್ಳಾರಿ ಜಿಲ್ಲೆಯ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳ ಮತ್ತು ಅಲೆಮಾರಿಗಳಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆಯಿಂದ ಹಿಡುದು ಸ್ವಚ್ಛತೆಯ ಬಗೆಗೆ ತರಬೇತಿಗಳನ್ನು ಕೊಟ್ಟಿದ್ದಾರೆ ಪರಿಣಾಮಕಾರಿಯಾಗಿ ಅಲೆಮಾರಿಗಳಾಗಿ ಒಂದು ಕಡೆಯಿಂದ ಇನ್ನೊಂದು ಕಡೆ ಜೀವನದ ಬದುಕನ್ನು ಹುಡುಕುತ್ತ ಹೊರಟಿದ್ದ ಬುಡಕಟ್ಟುಗಳ ಒಂದೆಡೆ ನೆಲೆನಿಂತು ಸ್ವ ಉದ್ಯೋಗದ ನೆಲೆಯಲ್ಲಿ ನಿಂತಿರುವುದು ತಿಳಿಯುತ್ತದೆ. ಸ್ವಯಂ ಸೇವಾ ಸಂಸ್ಥೆಗಳು ಇತ್ತೀಚೆಗೆ ಅಲೆಮಾರಿ ಬುಡಕಟ್ಟಿನ ಜನರಿಗೆ ತಾಂತ್ರಿಕ ಶಿಕ್ಷಣ. ಕಾಲೇಜು-ಶಿಕ್ಷಣ ಕನ್ನಡ ಸಂಸ್ಕೃತಿ, ಗ್ರಾಮೀಣ, ಮತ್ತು ಸಣ್ಣ ಕೈಗಾರಿಕೆ, ಅರಣ್ಯ ಪಶುಸಂಗೋಪನೆ ರೇಷ್ಮೆ

ಕೃಷಿ ತೋಟಗಾರಿಕೆ ಮೀನುಗಾರಿಕೆ, ವಸತಿ ಮಹಿಳೆಯವರ ಮತ್ತು ಮಕ್ಕಳ ಅಭಿವೃದ್ಧಿ ರಸ್ತೆ ಮತ್ತು ಸೇತುವೆ ಸಮಾಜ ಕಲ್ಯಾಣ ಇಲಾಖೆ, ಮುಂತಾದವುಗಳ ಬಗ್ಗೆ ಮಾಹಿತಿ ನೀಡಿರುವುದಲ್ಲದೆ ಅಲೆಮಾರಿಗಳು ಮುಖ್ಯವಾಹಿನಿಗೆ ಬರುವುದಕ್ಕೆ ಯಾವ ರೀತಿಯಲ್ಲಿ ಕೆಲಸ ಮಾಡುತ್ತಿರುವುದು. ತಿಳಿಸಲಾಯಿತು. ಇದರಿಂದ ಇಲ್ಲಿಯವರೆಗೆ ಸಂಸ್ಥೆಗಳು ಬುಡಕಟ್ಟುಗಳ ಬಗ್ಗೆ ಕೆಲಸ ಮಾಡುವುದಿಲ್ಲ ಎಂಬ ಆಪಾದನೆಗೆ ನಾವು ಒಂದು ಚರ್ಚಿಸುವುದೇನೆಂದರೆ ಸಂಸ್ಥೆಗಳು ಬುಡಕಟ್ಟುಗಳ ಅಭಿವೃದ್ಧಿಯ ಬಗ್ಗೆ ಕೆಲಸ ಮಾಡುವುದಿಲ್ಲ ಎಂಬ ಆಪಾದನೆಯಿಂದ ಮುಕ್ತವಾಗುತ್ತವೆ.

ಕ್ಷೇತ್ರಕಾರ್ಯ ಅನುಭವ ಮತ್ತು ಅಧ್ಯಯನದ ಹಿನ್ನಲೆಯಲ್ಲಿ ಹೇಳುವುದಾದರೆ ತಳ ಸಮುದಾಯಗಳ ಅಭಿವೃದ್ಧಿಯನ್ನು ಪಶ್ಚಿಮದ ನಕಲು ಯೋಜನೆಗಳಿಂದ ಸಾಧಿಸಲಾಗದು. ಸಂಸ್ಕೃತಿ ನಿಷ್ಠವಾದ ಉತ್ಪಾದನೆಯ ಸಾಮಾಜಿಕ ಪರಿಸರವನ್ನು ಬಲಪಡಿಸುತ್ತಾರೆ. ನಿಜವಾಗಿಯೂ ಆಗಬೇಕಾದ ಅಭಿವೃದ್ಧಿ ಯಾವುದೆಂದರೆ ಸಾಮಾಜಿಕ ವ್ಯವಸ್ಥೆಯೇ ಸಮಾಜದ ಕಣ್ಣು–ಕಟ್ಟಿಸಿ ಜೀವನ ಮೌಲ್ಯಗಳು ಮುಂದಿನ ಸಂಪತ್ತನ್ನು ಕುಬ್ಜಗೊಳಿಸುತ್ತಾವೆ ಹಿಂದು ಧರ್ಮದ ಆರ್ಥಿಕ ಅಪರಾಧಗಳಿಗೆ ಮಿತಿಯೇ ಇಲ್ಲ ಈ ಅಪರಾಧಗಳನ್ನು ಮರೆತು ನಿರ್ಧರಿಸುವ ಅಭಿವೃದ್ಧಿ ಕಾರ್ಯಕ್ರಮಗಳು ಕೇವಲ ಅಲಂಕಾರವಾಗಿರುತ್ತವೆ. ಜಾತಿ ಮತ್ತು ಮಾರ್ಗವಿಲ್ಲದೆ ಸಮಾಜವೇ ಸಹಜ ಅಭಿವೃದ್ಧಿಯ ದಾರಿಗಳನ್ನು ಸಲೀಸಗಿ ಕಂಡುಕೊಳ್ಳಬಲ್ಲದು ಆದರೆ ಅಂತಹ ಜಾತ್ಯತೀತ ವರ್ಗತೀತ ಸಂವೇದನೆಯೇ ಆಧುನಿಕ ಯುಗದ ರಾಜಕಾರಣಕ್ಕೆ ಇರುವುದಿಲ್ಲ ಎಂಬ ಮಾತು ನಿಜ ಸಂಗತಿಯಾಗಿದೆ. ಹಿಂದೂ ಧರ್ಮದ ಹೆಸರಿನಲ್ಲಿ ಕೇವಲ ಸಂಗತಿಯಾಗಿದೆ.

ಆಧುನಿಕ ಜಗತ್ತಿನ ಬೃಹತ್ ಯೋಜನೆಗಳು ತಳಸಮುದಾಯಗಳಿಗೆ ಅಗ್ಯವಿಲ್ಲ ಬೃಹತ್ ತಾಂತ್ರಿಕತೆ ಉತ್ಪಾದನಾ ವ್ಯವಸ್ಥೆಗಳೆಲ್ಲವು ದೇಶಿಯ ಉತ್ಪಾದನಾ ಕ್ರಮಗಳನ್ನು ನುಂಗಿಬಿಟ್ಟಿವೆ ತಳಸಮುದಾಯಗಳು ಅರ್ಥಿಕ ವ್ಯವಸ್ಥೆಯ ಬುನಾದಿ , ತಳಭದ್ರವಿಲ್ಲದೆ ತುದಿಯನ್ನು ಮಾತ್ರವೇ ರಕ್ಷಿಸುವ ಧೋರಣೆ ಅಪಾಯಕಾರಿಯಾದುದು. ದುಡಿಯುವ ಬೃಹತ್ ಸಮೂಹವನ್ನೇ ಆಚೆಗೆ ದೂಡಿ ಅನುಭೋಗಿ ವರ್ಗವನ್ನೇ ಪ್ರಾಧಾನ ಮಾಡಿದ್ದರಿಂದ ಮಾನವೀಯ ಮೌಲ್ಯಗಳ ಆರ್ಥಿಕ ವ್ಯವಸ್ಥೆಯು ಇಲ್ಲದಾಗಿದೆ. ಮಾರ್ಕ್ಸ್‌ವಾದವು ತಳಸಮುದಾಯಗಳ ಅಭಿವೃದ್ಧಿಯ ಮೀಮಾಂಸೆಯನ್ನು ವರ್ಗದಿಂದ ವಿಶ್ಲೇಷಿಸುತ್ತದೆ. ಭಾರತದ ವರ್ಣವ್ಯವಸ್ಥೆಯ ವಿಕಾರದ ಮೈತುಂಬ ವರ್ಗದ ವೇಷವನ್ನು ಧರಿಸಿ ಈ ಕಾಲದ ಶೋಷಣೆಯ ಸಂಕೀರ್ಣ ಸ್ವರೂಪವನ್ನು ಅಳವಡಿಸಿಕೊಂಡು ಆಳುವ ಇಂದಿನ ಆರ್ಥಿಕ ವ್ಯವಸ್ಥೆಯು ಏಕಕಾಲಕ್ಕೆ ಸನಾತನ ಮತ್ತು ಸಮಕಾಲೀನ ಎರಡು ಮಾನದಂಡಗಳ ಅಭಿವೃದ್ಧಿ ಎಂದರೆ ಮತ್ತೆ ಜಾತಿಗೆ ಮರಳುವುದೇ ಎಂಬ ಅನುಮಾನವು ನಿಜವಾದ ಎದುರಾಗುತ್ತದೆ. ನಿಜದ ನೆಲೆಯೆಂದರೆ ವೃತ್ತಿಯು ಉತ್ಪಾದನೆಯ ವಿನಃ ಅಂಟಿರುವುದು ಜಾತಿಯಲ್ಲ ಎಂಬ ಮನವರಿಕೆ ನಿಜವಾಗಿದೆ.

ಬುಡಕಟ್ಟು ಸಮುದಾಯಗಳು ಹೇಗೆ ಏಕರೀತಿಯ ಜೀವನಶೈಲಿಗಳು, ಏಕ ಪ್ರಕಾರದ ಜೀವನಾದ್ಯತೆಗಳನ್ನು ಹೊಂದಿಲ್ಲವೋ ಹಾಗೆಯೇ ಅವರ ಅಭಿವೃದ್ಧಿಗಾಗಿ ರೂಪಿಸಲ್ಪಡುವ ಅಭಿವೃದ್ಧಿ

ನೀತಿಗಳಲ್ಲಿಯೂ ಸಾರ್ವತ್ರಿಕತೆಯನ್ನು ಕಾಣಲು ಸಾಧ್ಯವಿಲ್ಲ. ಯಾವಾಗ ನಾವು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ನೀತಿಗಳನ್ನು ಸಮುದಾಯಗಳ ಹೊರಗೆ ನಿಂತು ರೂಪಿಸುತ್ತವೆಯೋ ಅಂತಹ ಅಭಿವೃದ್ಧಿ ನೀತಿ ಅಪ್ರಸ್ತುತ ಎಂತಲೆ ತಿಳಿಯಬೇಕು. ಮೇಲಿಂದ ಮೇಲೆ ತಮ್ಮ ಸಂಸ್ಕೃತಿ ಹಾಗು ಜೀವನದ ಮೂಲಕಗಳ ಮೇಲೆ ಆಗುತ್ತಿರುವ ಆಕ್ರಮಣ ಅಸಹನೀಯವಾದುದ್ದರಿಂದಲೇ ಇಂದು ವಿಶ್ವದಾದ್ಯಂತ ಬುಡಕಟ್ಟು ಜನರು ತಮ್ಮ ಅಕ್ರೋಶ ಅಸಮಧಾನಗಳ ವ್ಯಕ್ತಪಡಿಸುತ್ತಿರುವುದು. ಬುಡಕಟ್ಟು ಅಭಿವೃದ್ಧಿ ಪ್ರಾರಂಭವಾದಾಗಿನಿಂದ ಆ ಪ್ರಕ್ರಿಯೆ ಚುಕ್ಕಾಣಿಯನ್ನು ಹಿಡಿದಿರುವವರು ಹೊರಗಿನವರೇ ಆಗಿದ್ದಾರೆ. ಸರ್ಕಾರವಾಗಲಿ, ಸ್ವಯಂ ಸೇವಾ ಸಂಸ್ಥೆಯನ್ನಾಗಲಿ ಬುಡಕಟ್ಟಿನ ಒಳಗಿನಿಂದ ನಾಯಕತ್ವದ ತೃಪ್ತಿಗೆ ಆದ್ಯತೆಯನ್ನು ನೀಡಿರುವಂತ ಪ್ರಸಂಗಗಳು ಇನ್ನು ವಿರಳವಾಗಿದೆ.

ಸಮಾಜದ ಎಲ್ಲರ ಬದುಕಿಗೆ ಅನಿವಾರ್ಯವಾಗಿ ಹಲವಾರು ಸಂಪನ್ಮೂಲಗಳನ್ನು ಖಾಸಗಿ ಆಸಕ್ತಿಗಳ ಪೂರೈಕೆಗೆ ಬಳಸುವುದರಿಂದಾಗಿ ಅನ್ಯೆತಿಕ ಅನ್ನಿಸುವುದಿಲ್ಲ. ಅದೇ ರೀತಿ ಸಂಬಂಧ ಅಥವಾ ತನ್ನ ಸಮುದಾಯಕ್ಕೆ ಸೇರಿದವನು ಎನ್ನುವ ಕಾರಣಕ್ಕಾಗಿ ಸಂಸ್ಥೆಯ ನೀತಿ ನಿಯಮಗಳನ್ನು ಗಾಳಿಗೆ ತೂರಿ ವ್ಯವಹರಿಸುವುದು ಕೂಡ ಅನ್ಯೆತಿಕ, ಅಲ್ಲಿ ಅದೇ ರೀತಿಯ ಸಾಮಾಜಿಕ ಮೌಲ್ಯಗಳು ಒಂದು ಕಡೆಯಿಂದ ಕೆಳವರ್ಗದ ಹೀನಸ್ಥಿತಿಗೆ ಆ ವರ್ಗವನ್ನೇ ಜವಾಬ್ದಾರಿ ಮಾಡಿದರೆ ಮತ್ತೊಂದು ಕಡೆಯಿಂದ ಒಟ್ಟು ಸಮಾಜದ ಬಗ್ಗೆ ಇರಬೇಕಾದ ಜವಾಬ್ದಾರಿಯಿಂದ ಮೇಲ್ ವರ್ಗವನ್ನು ಪಾರುಮಾಡುತ್ತದೆ ಹಾಗೆಂದು ಇವೆಲ್ಲವನ್ನು ಒಂದು ನೈತಿಕ ಪ್ರಶ್ನೆಯನ್ನಾಗಿರುವುದರಿಂದ ಬುಡಕಟ್ಟು ಸಮಸ್ಯೆಗಳಿಗೆ ಪರಿಹಾರ ಸಿಗುವುದಿಲ್ಲ. ಏಕೆಂದರೆ ಪ್ರತಿಯೊಬ್ಬರಿಗೂ ಮತ್ತೊಬ್ಬರು ಅವರ ಮೇಲೆ ಮಾಡುವ ದಬ್ಬಾಳಿಕೆ, ಶೋಷಣೆ, ಯಾಜಮಾನಿಕೆಗಳೆಲ್ಲವು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಅವೆಲ್ಲಾ ಸಹಜವಾಗಿರುತ್ತವೆ. ಒಂದು ವೇಳೆ ಅರ್ಥವಾದರು ಅದರ ಪರಿಹಾರವನ್ನು ಮುಂದೂಡುತ್ತಲೆ ಇರುತ್ತದೆ. ಆದುದ್ದರಿಂದ ಅಲ್ಲಿ ಎರಡು ರೀತಿಯ ಕ್ರಮಗಳು ಅಗತ್ಯ ಒಂದು ರೀತಿಯ ಮೌಲ್ಯಗಳ ಕೊರತೆಯನ್ನು ಸಾಮಾಜಿಕ ಹಾಗೂ ರಾಜಕೀಯ ಒತ್ತಡಗಳಿಂದ ಮಾತ್ರಸರಿಪಡಿಸಿಕೊಳ್ಳಲು ಸಾದ್ಯ ಎರಡನೆಯದು ಅದಕ್ಕಾಗಿ ಬುಡಕಟ್ಟು ಮತ್ತು ಇತರ ಹಂಚಿನಲ್ಲಿ ಇರುವ ಸಮುದಾಯಗಳು ಸಂಘಟಿತ ಮಾಡಬೇಕಾಗಿದೆ ಸಾಮಾಜಿಕ ಚಳುವಳಿಗೆ ಮೂಲಕ ಹೊಸ ಕಾನೂನುಗಳು ಮತ್ತು ಇರುವ ಕಾನೂನುಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಬೇಕಾಗಿದೆ ಎಂಬುದು ನನ್ನ ಗ್ರಹಿಕೆ ನನ್ನ ಅಧ್ಯಾಯನದಿಂದ ತಿಳಿದಿರುವುದೇನೆಂದರೆ ನಾವು ಬುಡಕಟ್ಟು ಸಮುದಾಯಗಳನ್ನು ತಲುಪುವುದು ಅಷ್ಟು ಸುಲಭವಾದುದಲ್ಲ ಬುಡಕಟ್ಟುಗಳ ಭಾವನೆಗಳ ಜೊತೆ ಆಟ ಆಡಬಾರದು ಇದರಿಂದಾಗಿ ಸಮಾಜಶಾಸ್ತ್ರ ಮತ್ತು ಮಾನವ ಶಾಸ್ತ್ರಗಳ ಮೂಲಕ ಅವರನ್ನು ಅಧ್ಯಯನ ಮಾಡುವುದಲ್ಲದೆ ಬಲತ್ಕಾರದ ಮೂಲಕ ಸುಧಾರಿಸಲು ಹೊರಡುವುದು ಸರಿಯಲ್ಲ ಬಲತ್ಕಾರದ ಮೂಲಕ ಸುಧಾರಿಸಲು ಯತ್ನಿಸುವುದೆಂದರೆ ನಾವು ಆಧುನಿಕ ನಾಗರಿಕರು ಎಂಬುದು ನನ್ನ ತೋರುವ ಯತ್ನವೆ ವಿನಹ ಬುಡಕಟ್ಟುಗಳ ಅಭಿವೃದ್ಧಿ ಕುರಿತು ನೈಜ ಕಾಳಜಿ ಇರುವುದಿಲ್ಲ. ಆದ್ದರಿಂದ ಸಾರ್ವತ್ರಿಕ ಹಾಗೂ ಸದಾಭಿರುಚಿಯ ಮನೋಭಾವದಿಂದ ಬುಡಕಟ್ಟಿನ ಮನಸ್ಸಿಗೆ

ಹತ್ತಿರವಾಗಿ ಅಧ್ಯಯನ ಮಾಡಬೇಕಾಗುತ್ತದೆ.

ಸಾಮಾನ್ಯವಾಗಿ ಸಂಶೋಧನೆ ಮಾಡಲು ಬುಡಕಟ್ಟುಗಳ ಬಳಿಗೆ ಹೋಗಿ ದುರಾಶೆಯಿಂದ ಬುಡಕಟ್ಟುಗಳ ಬದುಕಲ್ಲಿ ತಲೆ ಹಾಕಲು ತೊಡಗುವುದು ಸರಿಯಾದ ಕ್ರಮವಾಗಿರುವುದಿಲ್ಲ. ಆದರೆ ಬುಡಕಟ್ಟುಗಳು ಮತ್ತು ಅಲೆಮಾರಿಗಳು ತಾವು ಸುರಕ್ಷಿತರು ಎಂಬ ಭಾವನೆಯನ್ನು ಮೂಡಿಸಿದರೆ ಯಾವ ಹೊರಗಿನ ವ್ಯಕ್ತಿಯು ಅಲ್ಲಿಗೆ ಹೋಗುವ ಅವಶ್ಯಕತೆ ಇರುವುದಿಲ್ಲ ಅಲ್ಲದೆ ಅವರ ಜಮೀನುಗಳನ್ನು ಯಾರೋ ಹೊಡೆದುಕೊಳ್ಳುವ ಸಾಧ್ಯತೆ ಇರುವುದಿಲ್ಲಾ ನಾವು ಅವರನ್ನು ಪ್ರೀತಿಯಿಂದ ಹೊಲಿಸಿಕೊಳ್ಳುವುದು ಮತ್ತು ಅವರ ಮನಸ್ಸನ್ನು ಗೆಲ್ಲುವದೇ ಸರಿಯಾದ ಮಾರ್ಗವಾಗಿದೆ. ಬಡಕಟ್ಟುಗಳು ಮತ್ತು ಅಲೆಮಾರಿಗಳು ವಾಸಿಸುವ ಪ್ರದೇಶಗಳಲ್ಲಿ ನಮ್ಮ ಮೊದಲ ಆಧ್ಯತೆಯೆಂದರೆ ರಸ್ತೆ ಮತ್ತು ಸಂಪರ್ಕ ಕಲ್ಪಿಸುವುದಾಗಿರಬೇಕು. ಇವುಗಳಿಲ್ಲದಿದ್ದಲ್ಲಿ ಬುಡಕಟ್ಟುಗಳ ಯಾವ ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಲಾರವು. ಶಾಲೆಗಳು, ಆಸ್ಪತ್ರೆಗಳು ಮತ್ತು ವಾಸಿಸಲು ಪುಟ್ಟ ಮನೆಗಳು ಅವರಿಗೆ ಬೇಕಾಗಿವೆ. ನಾವು ಅವರನ್ನು ಉದ್ದಾರ ಮಾಡುತ್ತವೆಯೆಂದುಕೊಂಡು ಹೋಗಿ ಜೀವನ ವಿಧಾನದಲ್ಲಿ ತಲೆ ಹಾಕುವ ಅವರ ಬದುಕನ್ನು ಅಂದಗೆಡಿಸುವ ಕೆಲಸಕ್ಕೆ ಕೈ ಹಾಕದೆ ಅವರ ಯಾವತ್ತು ಚೇತೋಹಾರಿಯಾಗಲು ನಾವು ಮಾಡಬೇಕಾದ ಸಹಾಯಗಳನ್ನು ಮಾಡಬೇಕಾಗುತ್ತದೆ. ಎಂಬುದನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ಅಲೆಮಾರಿಗಳ ಮಾತುಗಳಿಂದ ತಿಳಿಯಲಾಯಿತು. ಆದ್ದರಿಂದ ಬುಡಕಟ್ಟು ಸಮುದಾಯಗಳು ವಿಶಿಷ್ಟವಾದ ಸಂಸ್ಕೃತಿ ಮೈಗೂಡಿಸಿಕೊಂಡು ಶ್ರಮಿಕರಾಗಿ, ಕೂಲಿಂಕಾರರಾಗಿ ಭಿಕ್ಷೆ ಬೇಡಿಕೊಂಡು ಜೀವನ ಸಾಗಿಸುತ್ತಿರುವಾಗ ಸಂಶೋಧನೆಗಳು ಕ್ರಿಯಾಶೀಲವಾಗಿ ನಡೆಯುವುದಲ್ಲದೆ ಬುಡಕಟ್ಟು ಸಮುದಾಯಗಳಿಗೆ ದಾರಿಯನ್ನು ತೋರಿಸುವಂತೆ ಇರಬೇಕಾಗುತ್ತದೆ.

ಸಂಶೋಧನೆ ವಿಷಯವಾದ ಬುಡಕಟ್ಟುಗಳ ಅಭಿವೃದ್ಧಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಿದ ಹಿನ್ನಲೆಯಿಂದ ನನ್ನ ತಿಳುವಳಿಕೆಗೆ ಬಂದಿದ್ದೇನೆಂದರೆ ಬುಡಕಟ್ಟುಗಳು ಮತ್ತು ಅಲೆಮಾರಿಗಳು ವಾಸಿಸುವ ಪ್ರದೇಶಗಳಿಗೆ ನಾವು ಸರಕಾರಿ ಅಧಿಕಾರಿಗಳನ್ನು ನೇಮಿಸುವಾಗ ಎಚ್ಚರವಹಿಸಬೇಕಾಗುತ್ತದೆ. ಏಕೆಂದರೆ ನಾವು ನೇಮಿಸುವ ಅಧಿಕಾರಿ ಕೇವಲ, ನೇಮಕಾತಿ ಪ್ರಾಧಿಕಾರ ಬಯಸುವ ಪರೀಕ್ಷೆಗಳನ್ನು ಪಾಸಾಗಿರುವ ಮತ್ತು ನಾಮಕಾವಸ್ಥೆ . ವೃತ್ತಿ ತರಬೇತಿಯನ್ನು ಮಾತ್ರ ಪಡೆಯದಿದ್ದರೆ ಸಾಲದು ಅವನೊಬ್ಬ ಉತ್ಸಾಹಿ ವ್ಯಕ್ತಿಯಾಗಿರಬೇಕು ಕೇವಲ ಬುಡಕಟ್ಟು ಸಮಸ್ಯೆಗಳನ್ನು ಅರ್ಥಮಾಢಿಕೊಳ್ಳದೆ, ಹೃದಯದಿಂದ ಅವರ ನೋವುಗಳನ್ನು ಗ್ರಹಿಸುವಂತಾಗಬೇಕು. ಕರ್ತವ್ಯದ ಸಮಯದಲ್ಲಿ ಮಾತ್ರ ನೆಪಕ್ಕಾಗಿ ಕೆಲಸ ಮಾಡುವುದಾಗಬಾರದು ಆದ್ದರಿಂದ ಅಧಿಕಾರಿಗಳು ಮತ್ತು ಅಲೆಮಾರಿಗಳ ಹಿತವನ್ನು ಕುರಿತು ಚಿಂತನೆ. ಮಾಡದಿದ್ದಾಗ ಯಾವುದೇ ಕಾರ್ಯಕೈಗೂಡದು. ಆದ್ದರಿಂದ ಇದೆಲ್ಲಕ್ಕಿಂತ ಬುಡಕಟ್ಟುಗಳ ಮದ್ಯೆ ತಾನು ಒಬ್ಬನು ಎಂದು ತಿಳಿದು ಅವರನ್ನು ಪ್ರೀತಿಸುವ ಸ್ನೇಹದಿಂದ ಕಾಣುವ ಯಾವ ಪರೀಕ್ಷೆಯನ್ನು ಪಾಸು ಮಾಡದ ಒಬ್ಬ ಅನಕ್ಷರಸ್ತರನ್ನು ಬುಡಕಟ್ಟುಗಳ ಬಳಿ ಕಳುಹಿಸಲಾಗುವುದು. ಉತ್ತಮನಾದ ಒಬ್ಬ ಬುದ್ಧಿವಂತ ಸರಕಾರಿ ನೌಕರಿಗಿಂತ ಈ ಬಗೆಯ

ಹೃದಯವಂತ ಮನುಷ್ಯ ಬುಡಕಟ್ಟುಗಳಲ್ಲಿ ಪರಿಣಾಮಕಾರಿ ಬದಲಾವಣೆಗಳನ್ನು ತರಬಲ್ಲ ಮತ್ತು ಅವರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಬಲ್ಲ ಯಾವ ಒಬ್ಬ ವ್ಯಕ್ತಿ ಅಧಿಕಾರಿಯಾಗಿ ಬುಡಕಟ್ಟುಗಳ ಬಳಿ ಹೋಗುವನು ಆತ ತನ್ನ ಬದುಕನ್ನು ಬುಡಕಟ್ಟುಗಳ ಜೊತೆ ಹಂಚಿಕೊಳ್ಳಲು ತಯಾರಿರಬೇಕು. ಅವರ ಗುಡಿಸಲು ಬಳಿ ಹೋಗಿ ಅವರ ಬುಡಕಟ್ಟುಗಳ ಜೊತೆ ಹಂಚಿಕೊಳ್ಳಲು ತಯಾರಿರಬೇಕು. ಅವರ ಗುಡಿಸಲ ಬಳಿ ಹೋಗಿ ಅವರ ಜೊತೆ ಕುಳಿತು ಊಟ ಮಾಡಿ ಚರ್ಚಿಸಿ, ತಾನು ಅವನಿಗಿಂತ ಮೇಲು ವೆಂಬುದನ್ನು ತೋರಿಸಿಕೊಳ್ಳದೆ ಅವರುಗಳಲ್ಲಿ ತಾನು ಒಬ್ಬ ಎಂಬ ಮನೋಭಾವನೆಯನ್ನು ಸಮರಸಗೊಳ್ಳುವಂತೆ ಮಾಡಬೇಕು ಇಂತಹ ಅಧಿಕಾರಿ ಮಾತ್ರ ಬುಡಕಟ್ಟುಗಳಿಂದ ಪ್ರೀತಿ ಮತ್ತು ಗೌರವಗಳನ್ನು ಸಂಪಾದಿಸಬಹುದು ಎಂಬುದು ನನ್ನ ಅಭಿಪ್ರಾಯವಾಗಿದೆ. ಹಾಗೂ ಬುಡಕಟ್ಟುಗಳಿಂದ ಪ್ರೀತಿ ಮತ್ತು ಗೌರವಗಳನ್ನು ಸಂಪಾದಿಸಬಹುದು ಎಂಬುದು ನನ್ನ ಅಭಿಪ್ರಾಯವಾಗಿದೆ.

ಆಧಾರ ಗ್ರಂಥಗಳು :

· ಪ್ರಭಾಕರ್ ಎ.ಎಸ್.(ಸ) 'ಆದಿವಾಸಿ ಆಖ್ಯಾನ' ಸಿದ್ಧಾರ್ಥ ಪ್ರಕಾಶನ ಹೊಸಪೇಟೆ 2006.

· ಬೊರಲಿಂಗಯ್ಯ ಹಿ. ಚಿ.(ಸಂ) ಬುಡಕಟ್ಟು ಅಧ್ಯಯನ " ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–2003.

· ಬೊರಲಿಂಗಯ್ಯ . ಹಿ. ಚಿ. (ಸಂ) ಗಿರಿಜನ ನಾಡಿಗೆ ಪಯಣ' ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು –2006.

· ಕಾಳೇಗೌಡ ನಾಗವಾರ ಗಿರಿಜನ ಸಂಸ್ಕೃತಿ ಕರ್ನಾಟಕ ಜಾನಪದ ಯಕ್ಷಗಾನ ಅಕಾಡಮಿ ಬೆಂಗಳೂರು–2000.

· ಪ್ರಭಾಕರ ಎ.ಎಸ್. (ಸಂ.) ಬುಡ್ಡಕಟ್ಟು "ಅಭಿವೃದ್ಧಿ ಮೀಮಾಂಸೆ" ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ 2004.

· ಮೇತ್ರಿ ಕೆ.ಎಂ.(ಸಂ.) ಬುಡಕಟ್ಟು ಅಧ್ಯಯನ ಸಂಪುಟ  3 ಸಂಚಿಕೆ –2 ಪ್ರಸಾರಂಗ ಕ.ವಿ.ವಿ. ಹಂಪಿ 2006.

· ಬೋರಲಿಂಗಯ್ಯ ಹಿ ಚಿ. (ಸಂ) ಬುಡಕಟ್ಟು ಅಧ್ಯಯನ ಪ್ರಸಾರಂಗ ಕ.ವಿ.ವಿ. ಹಂಪಿ 2004.

· ಕಲಬುರ್ಗಿ ಎಂ.ಎಂ. "ಸಂಸ್ಕೃತಿ ಮತ್ತು ವಿಕೃತಿ" ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು 2006.

· ಸಿದ್ದಲಿಂಗಯ್ಯ "ಜನಸಂಸ್ಕೃತಿ" ಪ್ರಸರಂಗ ಕನ್ನಡ ವಿ.ವಿ. ಹಂಪಿ. 2007.

· ಅಗ್ರಹಾರ ಕೃಷ್ಣಮೂರ್ತಿ (ಸಂ) "ಸಂಸ್ಕೃತಿ ಕಥನ" ಕನ್ನಡ ಮಸ್ತಕ ಪ್ರಾಧಿಕಾರ ಬೆಂಗಳೂರು 2002.

· ಚಂದ್ರಶೇಖರ್ ಟಿ.ಆರ್. (ಸಂ.) ಅಭಿವೃದ್ಧಿ ಅಧ್ಯಯನ ಪ್ರಸಾರಂಗ ಕ.ವಿ.ವಿ. ಹಂಪಿ – 2005.

· ಶ್ರೀಧರ್ ಎ."ಸಂ" "ಅಭಿವೃದ್ಧಿ ಅಧ್ಯಯನ" ಪ್ರಸಾರಂಗ ಕ.ವಿ.ವಿ. ಹಂಪಿ 2006.

· ಚಂದ್ರಶೇಖರ ಟಿ.ಆರ್. (ಸಂ.) ಅಭಿವೃದ್ಧಿ ಅಧ್ಯಯನ ಪ್ರಸಾರಂಗ ಕ.ವಿ.ವಿ. ಹಂಪಿ 2002.

· ಚಂದ್ರಪೂಜಾರಿ ಎಂ. ಸಂ. ಅಭಿವೃದ್ಧಿ ಅಧ್ಯಯನ ಪ್ರಸಾರಂಗ ಕ.ವಿ.ವಿ. ಹಂಪಿ – 2003.

· ಶ್ರೀಧರ ಎ(ಸಂ) "ಅಭಿವೃದ್ಧಿ ಅಧ್ಯಯನ" ಪ್ರಸಾರಂಗ ಕ.ವಿ.ವಿ. ಹಂಪಿ 2006.

· ದೈವಜ್ಞಾ ಗಂಗಾಧರ "ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ" ಪ್ರಸಾರಂಗ ಕ.ವಿ.ವಿ. ಹಂಪಿ 2000.

· ಪ್ರಭಾಕರ್ ಎ.ಎಸ್. "ಮ್ಯಾಸಬೇಡರ ಕಥನಗಳು" ಪ್ರಸಾರಂಗ ಕ.ವಿ.ವಿ. ಹಂಪಿ 1999.

ಬೋರಲಿಂಗಯ್ಯ ಹಿ. ಚಿ. "ಕಾಡು ಕಾಂಕ್ರೀಟ್ ಮತ್ತು ಜಾನಪದ ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ  1995.

ಬೋರಲಿಂಗಯ್ಯ ಹಿ. ಚಿ. "ವಿಸ್ಮತಿ ಮತ್ತು ಸಂಸ್ಕೃತಿ" ಸಿ.ವಿ.ಜಿ. ಪಬ್ಲಿಕೇಶನ್ ಬೆಂಗಳೂರು 2001.

ಬೋರಲಿಂಗಯ್ಯ ಹಿ. ಚಿ "ಗಿರಿಜನರಿಗೆ ಇನ್ನು ಕನಸಾಗಿರುವ ಅಭಿವೃದ್ಧಿ ಕರ್ನಾಟಕ ಜಾನಪದ ಯಕ್ಷಗಾನ ಅಕಾಡಮಿ ಬೆಂಗಳೂರು-1993.

ಲಕ್ಕಪ್ಪಗೌಡ ಹೆಚ್.ಜೆ. "ಕರ್ನಾಟಕ ಬುಡಕಟ್ಟುಗಳು" ಕರ್ನಾಟಕ ಜಾನಪದ ಯಕ್ಷಗಾನ ಅಕಾಡಮಿ ಬೆಂಗಳೂರು 2000.

<u>ವಕ್ತೃಗಳು:</u>

1)

| | |
|---|---|
| ಸಂಸ್ಥೆಯ ಹೆಸರು | :- ಸ್ನೇಹ ಸಂಸ್ಥೆ. |
| ಹೆಸರು | :- ಟಿ. ರಾಮಾಂಜನೇಯ. |
| ವಯಸ್ಸು | :- 35 |
| ವಿದ್ಯಾರ್ಹತೆ | :- ಬಿ.ಎ |
| ಜಾತಿ | :- ಒ.ಬಿ.ಸಿ |
| ಸ್ಥಳ | :- ಕೂಡ್ಲಿಗಿ |
| ವೃತ್ತಿ | :- ಸಮಾಜ ಸೇವೆ |

2)

| | |
|---|---|
| ಸಂಸ್ಥೆಯ ಹೆಸರು | :- ವಾಹಿನಿ |
| ಹೆಸರು | :- ಕಾಮಾಕ್ಷಿ. |
| ವಯಸ್ಸು | :- 24 |
| ವಿದ್ಯಾರ್ಹತೆ | :- ಪಿ.ಯು.ಸಿ |
| ಜಾತಿ | :- ಎಸ್.ಸಿ |
| ಸ್ಥಳ | :- ಹೊಸಪೇಟೆ |
| ವೃತ್ತಿ | :- ಸಮುದಾಯ ಸಂಘಟಕಿ |

3)

ಸಂಸ್ಥೆಯ ಹೆಸರು :– ಅಭಿವೃದ್ಧಿ ಸಾಮಾಜಿಕ ಸೇವಾ ಸಂಸ್ಥೆ.

ಹೆಸರು :– ನರಸಿಂಹಮೂರ್ತಿ.

ವಯಸ್ಸು :– 43

ವಿದ್ಯಾರ್ಹತೆ :– ಎಂ.ಎ

ಜಾತಿ :– ಒಕ್ಕಲಿಗ

ಸ್ಥಳ :– ಸಂಡೂರು

ವೃತ್ತಿ :– ಸಮಾಜ ಸೇವೆ

4)

ಸಂಸ್ಥೆಯ ಹೆಸರು :– ಅಂಗವಿಕಲರ ಪುನಶ್ಚೇತನ ಸಂಸ್ಥೆ.

ಹೆಸರು :– ಬಸವನಗೌಡ ಪಾಟೀಲ್.

ವಯಸ್ಸು :– 40

ವಿದ್ಯಾರ್ಹತೆ :– ಪಿ.ಯು.ಸಿ

ಜಾತಿ :– ಲಿಂಗಾಯತ್

ಸ್ಥಳ :– ಹೊಸಪೇಟೆ

ವೃತ್ತಿ :– ಸಮಾಜ ಕಾರ್ಯಕರ್ತ

5)

ಸಂಸ್ಥೆಯ ಹೆಸರು :– ಐಡಿಯಾಸ್.

ಹೆಸರು :– ಸ್ಯಾಮುವೆಲ್.

ವಯಸ್ಸು :– 34

ವಿದ್ಯಾರ್ಹತೆ :– ಎಂ.ಎ

ಜಾತಿ :– ಕ್ರಿಶ್ಚಿಯನ್

ಸ್ಥಳ :– ಹಗರಿ ಬೊಮ್ಮನಹಳ್ಳಿ

ವೃತ್ತಿ :– ಸಮಾಜ ಸೇವೆ

6)

ಸಂಸ್ಥೆಯ ಹೆಸರು :– ದಲಿತ ಮಹಾಸಭೆ.

ಹೆಸರು :– ಅಂಜಿನಪ್ಪ.

ವಯಸ್ಸು :– 29

ವಿದ್ಯಾರ್ಹತೆ :– ಪಿ.ಯು.ಸಿ

ಜಾತಿ :– ಎಸ್.ಟಿ

ಸ್ಥಳ :– ಬಳ್ಳಾರಿ

ವೃತ್ತಿ :– ಸಂಘಟಕ

7)

ಸಂಸ್ಥೆಯ ಹೆಸರು :– ಅಂಬೇಡಕರ್ ಸಭ.

ಹೆಸರು :– ಸಚಿಜಿವಪ್ಪ ಮಂಡಲ್

ವಯಸ್ಸು :– 31

ವಿದ್ಯಾರ್ಹತೆ :– 10 ನೇ ತರಗತಿ

ಜಾತಿ :– ಎಸ್.ಟಿ

ಸ್ಥಳ :– ಬಳ್ಳಾರಿ

ವೃತ್ತಿ :– ಸಮಾಜ ಕಾರ್ಯಕರ್ತ

8)

ಸಂಸ್ಥೆಯ ಹೆಸರು :– ಕರ್ಡ್ಸ್.

ಹೆಸರು :– ಬಿ.ಡಿ.ಗೌಡ

ವಯಸ್ಸು :– 41

ವಿದ್ಯಾರ್ಹತೆ :– ಎಂ.ಎ

ಜಾತಿ :– ಲಿಂಗಾಯತ್

ಸ್ಥಳ :– ಬಳ್ಳಾರಿ

ವೃತ್ತಿ :– ಸಮಾಜ ಸೇವೆ

9)

| | |
|---|---|
| ಸಂಸ್ಥೆಯ ಹೆಸರು | :– ಟ್ರೈಬಲ್ ಡೌಲಪ್‌ಮೆಂಟ್ ಸೊಸೈಟಿ. |
| ಹೆಸರು | :– ರಾಮಸ್ವಾಮಿ |
| ವಯಸ್ಸು | :– 45 |
| ವಿದ್ಯಾರ್ಹತೆ | :– ಬಿ.ಎ |
| ಜಾತಿ | :– ಎಸ್.ಟಿ |
| ಸ್ಥಳ | :– ಬಳ್ಳಾರಿ |
| ವೃತ್ತಿ | :– ಸಮಾಜ ಸೇವೆ |

10)

| | |
|---|---|
| ಸಂಸ್ಥೆಯ ಹೆಸರು | :– ನಿತ್ಯ ಜೀವನ. |
| ಹೆಸರು | :– ಕುಮಾರನ್ |
| ವಯಸ್ಸು | :– 38 |
| ವಿದ್ಯಾರ್ಹತೆ | :– ಬಿ.ಎ |
| ಜಾತಿ | :– ಎಸ್.ಸಿ |
| ಸ್ಥಳ | :– ಬಳ್ಳಾರಿ ಜಿಲ್ಲೆ |
| ವೃತ್ತಿ | :– ಕಾರ್ಯದರ್ಶಿ ಕರ್ನಾಟಕ ಎಚ್.ಐ.ವಿ ಸೋಂಕಿತರ ಜಾಲ ಬೆಂಗಳೂರು. |




ಸ್ವಯಂ ಸೇವಾ ಸಂಸ್ಥೆ.



ಮಕ್ಕಳ ದ್ವಜಾರೋಹಣ ಸಂಸ್ಥೆಯ ಮುಂದೆ.



ಬುಡಕಟ್ಟು ಕುಟುಂಬ.



ತೀರದ ಬಡತನ.



ಬುಡಕಟ್ಟು ಮಗುವಿನ ಸ್ಥಿತಿ.



ಕೆಲಸದಲ್ಲಿ ನಿರತ ಬುಡಕಟ್ಟು ಮಗು.



ಸಂಸ್ಥೆಗೆ ವಿದೇಶಿ ಅನುದಾನ.



ಸಂಸ್ಥೆಯವರೊಂದಿಗೆ ಸಂವಾದ.




ಲಸಿಕೆ ಕಾರ್ಯಕ್ರಮ.



ಆಪ್ತ ಸಮಾಲೋಚನೆ.



ಆರೋಗ್ಯ ತಪಾಸಣೆ.



ಬುಡಕಟ್ಟು ಜನರಿಗೆ ಚಿಕಿತ್ಸೆ.



ಕಲಿಕೆಯಲ್ಲಿ ನಿರತ ಮಕ್ಕಳು.



ಸಂಸ್ಥೆಯ ಪೂರ್ವ ಪ್ರಾಥಮಿಕ ಶಾಲೆ.



ಸೇತುಬಂಧ ಶಾಲೆ ಮಕ್ಕಳು.



ಶೈಕ್ಷಣಿಕ ಜಾಗೃತಿ.

